**Results of Chandamama—Camlin Colouring Contest No. 18 (Kannada)**

*1st Prize:* Somashe Kar M. K., Mande. *2nd Prize:* Bhojaraj K. Shetti, Hindwadi. *3rd Prize:* Ajit M. Patrekar, Karwar. *Consolation Prizes:* M. Rajasekhara, Kampli; K. Sumithra, Nariecombu; J. V. Kamalkumar, Bangalore-19; T. S. Indrani, Bangalore-28; A. N. Ramesh, Arsikere.



# ಚಂದಮಾಮ

ಏಪ್ರಿಲ್ 1981



## ಈ ಸಂಚಿಕೆಯಲ್ಲಿ






ಬಿಡಿ ಪ್ರತಿ ರೂ. ೧-೫೦

ವಾರ್ಷಿಕ ಚಂದಾ ರೂ. ೧೮-೦೦


ಪ್ರಿಯ ಪುಟಾಣಿಗೆಳೆಯರೇ,
ನಿಮಗೆ "ಪ್ರಚಂಡ ಪುಟಾಣಿ"ಗಳ ನಮಸ್ಕಾರಗಳು.
ಡೈರೆಕ್ಟರ್ "ಗೀತಪ್ರಿಯ" ಪ್ರೊಡ್ಯೂಸರ್ "ಬಾಲಾಜಿಸಿಂಗ್"
ಅಂಕಲ್‌ಗೆ ಗೊತ್ತು ಮಾರ್ಚ್ ಮತ್ತು ಏಪ್ರಿಲ್ ತಿಂಗಳಲ್ಲಿ ನಿಮ್ಮೆಲ್ರಿಗೂ
ಪರೀಕ್ಷೆ ಅಂತ. ಪರೀಕ್ಷೆಗೆ ನೀವೆಲ್ಲಾ ಕಷ್ಟಪಟ್ಟು ಓದ್ಬೇಕು. ಖಂಡಿತಾ
ಪಾಸ್ ಮಾಡ್ಬೇಕು. ತಾಯಿ, ತಂದೆ ಗಳಿಗೂ ಸ್ಕೂಲಿಗೂ ಒಳ್ಳೇ
ಹೆಸರು ತರ್ಬೇಕು. ಗೊತ್ತು. ನಿಮ್ಗೆಲ್ಲಾ ಓದಿ ಓದಿ ಒಂದ್‌ಥರ
ಸುಸ್ತಾಗಿರುತ್ತೇ ಅಂತೆ.
ಅದಕ್ಕೇ ನಿಮ್ ಪರೀಕ್ಷೆ ಆದ್ಮೇಲೆ ಆಸುಸ್ತೆಲ್ಲಾ ಮರೆಸಿ
ನಿಮ್ಗೆಲ್ಲಾ ಮಜಾ ಅಂದ್ರೆ ಮಜಾ ಕೊಡೋಕೆ ಏಪ್ರಿಲ್
ತಿಂಗಳಲ್ಲಿ ನಮ್ಮನ್ನ ಸಿನಿಮಾ ತೆರೆ ಮೇಲೆ ಕಳಿಸ್ತಿದಾರೆ.
ನೀವು ನಿಮ್ಮ ಡ್ಯಾಡಿ, ಮಮ್ಮಿ ಅಜ್ಜ, ಅಜ್ಜಿ, ಅಣ್ಣ, ತಮ್ಮ, ಅಕ್ಕ,
ತಂಗಿ, ಚಿಲ್ಟು, ಪಿಲ್ಟು ಎಲ್ರನ್ನೂ ಕರ್ಕೊಂಡ್ಬಂದು ನಮ್ಮ ಕರಾಮತ್ತೇ
ನೋಡಿದ್ರೆ "ಚೆನ್ನಾಗಿದೆ - ಚೆನ್ನಾಗಿದೆ ಅಂತ ಮೆಚ್ಕೋತೀರಿ
ಅನ್ನೋ ಗ್ಯಾರಂಟಿ ಕೊಡ್ತೀವಿ.
ನಿಮ್ಗೆ ಖುಷಿ ಕೊಡೋಕೆ ನಾಯಿ- "ಟಾಮಿ", ಕೋತಿ
"ಹನುಮ" ಇದಾರೆ
ನಂ ನಮಸ್ಕಾರಾನ ನಿಂ ಮಮ್ಮಿ, ಡ್ಯಾಡಿ, ಪಿಲ್ಟು, ಚಿಲ್ಟು
ಎಲ್ರಿಗೂ ಹೇಳಿ ಮರೀಬೇಡಿ ಟಾಟಾ ಬೈಬೈ!!
ಇತಿ ನಿಮ್ಮ ಪ್ರಚಂಡ ಪುಟಾಣಿಗಳು
ರಾಮಕೃಷ್ಣ ಹೆಗ್ಗಡೆ
ಬೇಬಿ ಇಂದಿರಾ
ಭಾನುಪ್ರಕಾಶ್
ನವೀನ್

ಡಾಕ್ಟರ್, ನನ್ನ ಮಗೂಗೆ ಮೈ ಚೆನ್ನಾಗಿಲ್ಲ, ತುಂಬಾ ಸೊರಗಿದಾಳೆ. ಏನೂಂತ ಸ್ವಲ್ಪ ನೋಡ್ತೀರಾ, ಪ್ಲೀಸ್?

ಜ್ವರ ಇಲ್ಲಕಣೇ, ಸ್ವಲ್ಪ ಹೊಟ್ಟೆ ತೊಂದರೆ, ಅಷ್ಟೇ. ವುಡ್‌ವರ್ಡ್ಸ್ ಗ್ರೈಪ್ ವಾಟರ್ ಕೊಟ್ಟುಬಿಟ್ಟರೆ ಸಾಕು.

ಮಳೆ ಸುರೀತಾ ಇದೆ ಯಲ್ಲ, ಡಾಕ್ಟರ್ ವುಡ್‌ವರ್ಡ್ಸ್ ಗ್ರೈಪ್ ವಾಟರನ್ನ ಈಗ ನಾನು ಅವಳಿಗೆ ಕೊಡಬೋದಾ?

ಕೊಡಬೋದಮ್ಮಾ, ಊಂ ಮಳೆ, ಬಿಸಿಲು ಚಳಿ, ಯಾವಾಗ ಬೇಕಾದ್ರೂ. ಮಕ್ಕಳ ಆರೋಗ್ಯಕ್ಕಾಗಿ ಇರೋದೇ ಈ ವುಡ್‌ವರ್ಡ್ಸ್ ಗ್ರೈಪ್ ವಾಟರ್.






100 ವರ್ಷಗಳಿಗೂ ಹೆಚ್ಚು ಕಾಲ
ಮಾತೃಲೋಕದ ವಿಶ್ವಾಸಪಾತ್ರವಾದುದು

# ವುಡ್‌ವರ್ಡ್ಸ್ ಗ್ರೈಪ್ ವಾಟರ್

CAS OPPL 3/80 KN

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

**ದಾ**ನಧರ್ಮಗಳನ್ನು ಮಾಡುವಂತಹ ಶಕ್ತಿ ಇದ್ದರೂ ಜಿಪುಣ ತನದಿಂದ ಯಾರ ಸುಖ ದುಃಖಗಳನ್ನೂ ಹಚ್ಚಿಕೊಳ್ಳದ ವ್ಯಕ್ತಿಗಳು ಸಮಾಜದಲ್ಲಿರುತ್ತಾರೆ. ಸಂಪತ್ತನ್ನು ಅಭಿವೃದ್ಧಿಗೊಳಿಸುವ ದೃಷ್ಟಿಯೊಂದೇ ಅವರಿಗಿರುತ್ತದೆ. ಅಂಥವರ ಮೂಢನಂಬುಗೆಗಳೂ ಅದಕ್ಕೆ ಅನುಸಾರವಾಗಿಯೇ ಸಾಗುತ್ತವೆ. "ಮೋಸ ಹೋದ ಮೋಸಗಾರ" ಎಂಬ ಕಥೆಯ ಪರಿಣಾಮವು ಅಂಥವರ ಗುಣ ಪರಿವರ್ತನೆಗೆ ದಾರಿಯಾಗುವುದನ್ನು ನೋಡಬಹುದು.

## ಅಮರವಾಣಿ

**ನಾಭ್ಯುತ್ಥಾನ ಕ್ರಿಯಾ ಯತ್ರ ನಾಲಾಪಾ ಮಧುರಾಕ್ಷರಾಃ**
**ಗುಣದೋಷ ಕಥಾ ನೈವ ತತ್ರ ಹರ್ಮ್ಯೇನ ಗಮ್ಯತೇ**

ಅತಿಥಿಗಳನ್ನು ಆಪ್ಯಾಯತೆಯಿಂದ ಮಾತಾಡಿಸಿ, ಯೋಗ ಕ್ಷೇಮ ವಿಚಾರಿಸದ, ಗೌರವ ಮರ್ಯಾದೆಗಳಿಲ್ಲದ ಮನೆಗೆ ಹೋಗಲೇ ಬಾರದು.

ಸಂಪುಟ : ೬೬ ಏಪ್ರಿಲ್ '೮೧ ಸಂಚಿಕೆ : ೪

ಬಿಡಿ ಪ್ರತಿ ರೂ. ೧-೫೦ : : ವಾರ್ಷಿಕ ಚಂದಾ ರೂ. ೧೮-೦೦




CHITRA



# ಸಂತೋಷದವನು

ಭೀಮಪುರದ ಭೀಮಯ್ಯನೂ, ರಾಮಪುರದ ರಾಮಯ್ಯನೂ ಚಿಕ್ಕಪ್ರಾಯದಲ್ಲಿ ಸ್ವಲ್ಪ ಕಾಲ ಒಟ್ಟೊಟ್ಟಿಗೆ ಓದಿಕೊಂಡು ಆಮೇಲೆ ಬೇರೆ ಬೇರೆ ಯಾದವರು. ಮುಂದೆ ಪರಸ್ಪರ ಸಮಾಚಾರ ಕೇಳಿ ತಿಳಿದಿದ್ದರೇ ಹೊರತು ದರ್ಶನ ಮಾಡಿರಲಿಲ್ಲ. ಯಾವಾಗಲೂ ಏನೋ ಚಿಂತೆಯಿಂದಿರುವ, ಭೀಮಯ್ಯನಿಗೆ, ಯಾವಾಗಲೂ ಸಂತೋಷದಲ್ಲೇ ಇರುವ ರಾಮಯ್ಯನನ್ನು ನೋಡಬೇಕೆಂದೆನಿಸಿ ರಾಮಪುರಕ್ಕೆ ಹೊರಟನು.

ಭೀಮಯ್ಯನು ಬಂದಾಗ ರಾಮಯ್ಯ ಮಲಗಿದ್ದನು. ಅವನ ಕಾಲಿಗೆ ದೊಡ್ಡ ಕಟ್ಟುಕಟ್ಟಲಾಗಿತ್ತು. ಏನಾಯಿತೆಂದು ಭೀಮಯ್ಯ ಕೇಳಲು, "ಮತ್ತೇನಿಲ್ಲ. ಗದ್ದೆಯಲ್ಲಿ ಜಾರಿಬಿದ್ದೆ. ಎಲುಬು ಕದಲಿದೆಯಂತೆ. ಎರಡು ತಿಂಗಳು ಮಲಗಿದಲ್ಲೇ ಇರಬೇಕೆಂದಿದ್ದಾರೆ ವೈದ್ಯರು" ಎಂದು ಸಮಾಧಾನ ಹೇಳಿದ ರಾಮಯ್ಯ. "ಅಯ್ಯೋ! ಪಾಪವೇ! ಬಹಳ ಕಷ್ಟಬಂತಲ್ಲ ನಿನಗೆ ?" ಎಂದು ಭೀಮಯ್ಯ ಅನುತಾಪ ತೋರಿದ.

"ಇದರಲ್ಲಿ ಅಂತಹ ಕಷ್ಟವೇನಿದೆ ಬಿಡಯ್ಯ. ಇಂಥಾದ್ದೇನಾದರೂ ಆದ ಹೊರತು ವಿಶ್ರಾಂತಿ ಪಡೆಯುವವನಲ್ಲ ನಾನು. ಕಾಳಿದಾಸನ ಮೇಘಸಂದೇಶ ಓದಬೇಕೆಂದು ಎಂದಿನಿಂದಲೋ ಆಶೆಪಡುತ್ತಿದ್ದೇನೆ. ಅದು ಈಗ ನೆರವೇರುತ್ತಾ ಇದೆ." ಎಂದ ರಾಮಯ್ಯ. ಆಗ ರಾಮಯ್ಯನ ಮಗನು ಬಂದು, "ಅಪ್ಪಾ, ನಿನ್ನನ್ನು ಆ ಸೋಮಯ್ಯ ಬಯ್ಯುತ್ತಾ ಇದ್ದಾನೆ !" ಎಂದನು ಧುಸುಮುಸುಕಳೆ ಧುಮುಕಿಸುತ್ತಾ.

"ಬಯ್ದರೆ ಬಯ್ಯಲಿ ಬಿಡೋ ! ನಮಗೇನು ನಷ್ಟ ?" ಎಂದನು ರಾಮಯ್ಯ. ಹುಡುಗನು ಬೇಸರದಿಂದ, "ಅವನಿಂದ ಕೆಟ್ಟ ಮಾತು ಹೇಳಿಸಿ ಕೊಂಡು ನಾವು ಸುಮ್ಮನಿದ್ದರೆ ನಮ್ಮನ್ನು ಕೈಲಾಗದ ಪುಕ್ಕರೆಂದು ಕೊಳ್ಳುತ್ತಾನೆ !" ಎಂದನು.

"ನಾನು ಕೈಲಾಗದ ಪುಕ್ಕನೇ ಆದರೆ ಅವನು ಹೇಳುವುದರಲ್ಲಿ ತಪ್ಪೇನಿದೆ? ಇದ್ದ ಮಾತನ್ನೇ ಹೇಳಿದ ನೆಂದುಕೊಂಡರಾಯಿತು " ಎಂದನು ರಾಮಯ್ಯ.

"ಅವನು ಹೇಳಿದ ಕೂಡಲೇ ನಾವು ಹಾಗೇ ಆಗುತ್ತೇವೇನು ?" ಎಂದು ಮಗನು ರೇಗಿಕೊಂಡನು.

"ನಾವು ಹಾಗಾಗಿಲ್ಲಾ ಅಂತಲೇ ಇಟ್ಟುಕೋ. ಅವನು ಹೇಳುವುದು ಸುಳ್ಳು ಅಂದುಕೋ. ಅವನು ಹೇಳಿದ್ದ ರಿಂದ ನಮಗೇನು ನಷ್ಟ?" ಎಂದನು ರಾಮಯ್ಯ.

"ನಷ್ಟವಿರಲಿ, ಇಲ್ಲದೆ ಹೋಗಲಿ. ಅವನು ಹೇಳಿದ್ದನ್ನು ಕೇಳಿ ನಾವೇಕೆ ಸುಮ್ಮನಿರಬೇಕು ಅಂತ ?" ಎಂದು ಚೀರಿ ಹೇಳಿದ ಮಗ.

"ಲೋ ! ಮಗಾ, ನಿನ್ನನ್ನು ಒಂದು ಮಾತು ಕೇಳುತ್ತೇನೆ. ಅವನು ಹಾಗೆಲ್ಲಾ ಏತಕ್ಕಾಗಿ ಹೇಳುತ್ತಾನೆ ಗೊತ್ತಿದೆಯೆ ? ಇಷ್ಟರವರೆಗೆ ನನ್ನನ್ನು ಹಾಗೆಲ್ಲಾ ಬಯ್ದವನು ಅಲ್ಲವಷ್ಟೆ ?" ಎಂದ ರಾಮಯ್ಯ.

"ಹೌದು. ಅವನಿಗೆ ಹೊಟ್ಟೇಕಿಚ್ಚು. ಹಿಂದೆ ನಮಗೆ ಅವನಿಗಿಂತ ಕಡಿಮೆ ಗದ್ದೆಯ ಆದಾಯವಿತ್ತು. ನೀವು ಸಾಧನೆಮಾಡಿ ದುಡಿದು ಅವನಿಗಿಂತ ಹೆಚ್ಚು ಲಾಭ ಪಡೆಯುವುದನ್ನು ನೋಡಿ, ಕರುಬಿ ಹೀಗೆ ಕಕ್ಕುತ್ತಾನೆ" ಎಂದ ರಾಮಯ್ಯನ ಮಗ. "ಗೊತ್ತಿದೆಯಷ್ಟೆ ? ಬಿಡಿನ್ನು. ಯಾವನಾದರೂ ನಮ್ಮನ್ನು ಕಾರಣವಿಲ್ಲದೆ ಬಯ್ಯುತ್ತಾನೆಂದರೆ ಅದರ ಹಿಂದೆ ಒಂದು ಕಥೆ ಅಡಗಿದೆಯೆಂದಾಯಿತು. ಒಬ್ಬನು ಸುಮ್ಮ ಸಮ್ಮನೆ ನಮ್ಮನ್ನು ಬಯ್ದರೆ, ನಾವು ತುಂಬಾ ಒಳ್ಳೇ ಸ್ಥಿತಿಯಲ್ಲಿದ್ದೇವೆಂದು ತಿಳಿದು ಸಂತೋಷ ಪಡಬೇಕು. ಅದಕ್ಕಾಗಿ ನಾವೂ ರುಸುಮುಸು ಮಾಡಿಕೊಂಡು ಹಾರಿದರೆ ನಮ್ಮನ್ನು ನಾವೇ ಹಿಂಸಿಸಿಕೊಂಡಂತೆ" ಎಂದ ರಾಮಯ್ಯ.

"ಎಲ್ಲದಕ್ಕೂ ಸಂತೋಷಪಡುವುದೊಂದೇ ನಿಮಗೆ ಗೊತ್ತು !" ಎಂದು ಕೈ ಕೈ ಹಿಸುಕಿಕೊಳ್ಳುತ್ತಾ ಹೊರಟುಹೋದ ರಾಮಯ್ಯನ ಮಗ. "ನೋಡಿದಿಯಾ ಭೀಮಯ್ಯಾ, ಆಳವಾಗಿ ಆಲೋಚನೆ ಮಾಡಿದರೆ ಈ ಪ್ರಪಂಚದಲ್ಲಿ ಚಿಂತಿಸಬೇಕಾದ ಅಗತ್ಯವೇನೂ ಇಲ್ಲ. ಇದನ್ನು ನೀನು ಒಪ್ಪಿಕೊಳ್ಳು-ವಿಯಾ ?" ಎಂದು ರಾಮಯ್ಯ ಭೀಮಯ್ಯನನ್ನು ಕೇಳಿದ.

"ನೀನು ಹೇಳುವ ಪ್ರಕಾರ ಒಪ್ಪಿಕೊಳ್ಳದೇ ಏನು ಮಾಡಲಿ ? ಮಂಚದಲ್ಲಿ ಏಳಲಾಗದ ಪರಿಸ್ಥಿತಿಯಲ್ಲಿ ನೀನು ಇರುವಾಗ ನಿನ್ನ ಹೆಂಡತಿ ನಿನಗೆ ಹಿತವಾಗಿ ಸೇವೆ ಮಾಡುತ್ತಾಳೆ. ಎಷ್ಟು ಆವೇಶವಿದ್ದರೂ ನಿನ್ನ ಮಗ ನಿನ್ನ ಮಾತನ್ನು ಕೇಳುತ್ತಾನೆ. ನಿನ್ನ ಹಾಗೆಯೇ ನಾನು ಒಂದು ವೇಳೆ ಹಾಸಿಗೆ ಹಿಡಿದು ಬಿಟ್ಟರೆ ನನ್ನ ಹೆಂಡತಿ ನನಗೆ ಹೀಗೆ ಸೇವೆ ಮಾಡುವವಳಾಗಿರುವುದಿಲ್ಲ. ನನ್ನ ಮಗನಂತೂ ಒಂದು ಸಾರಿ ಕೂಡಾ ನನ್ನ ಮಾತು ಕೇಳುವವನಲ್ಲ. ನನ್ನ ದುರದೃಷ್ಟಕ್ಕೆ ನನಗೆ ಯಾವಾಗಲೂ ಚಿಂತೆಯೇಗತಿ! ಎಂದನು ಭೀಮಯ್ಯ.

"ಅದು ನಿಜವೇ. ಮನಸ್ಸು ಸ್ಥಿಮಿತಗೊಂಡು ಸಂತೋಷ ಬರಲು ಅದೃಷ್ಟಬೇಕು. ನಿನ್ನ ಅದೃಷ್ಟ ಹೀಗೆಂದು ತಿಳಿದ ಮೇಲೆ ಅದಕ್ಕಾಗಿ ಚಿಂತಿಸದಿದ್ದರೆ, ಉಳಿಯುವುದು ಸಂತೋಷವೇ" ಎಂದನು ರಾಮಯ್ಯ.

ಭೀಮಯ್ಯನು ರಾಮಯ್ಯನ ಮನೆಯಲ್ಲಿ ಒಂದು ದಿನವಿದ್ದು, ನೆಮ್ಮದಿಯಿಂದ ಹಿಂದಿರುಗಿದನು.







# ಮೋಸಹೋದ ಮೋಸಗಾರ

**ಸು**ಮಾರು ನಲುವತ್ತು ವರ್ಷಗಳ ಹಿಂದೆ, ಬಾಬಣ್ಣನೆಂಬೊಬ್ಬ ಧನಿಕರೈತನು ಒಂದು ಊರಿನಲ್ಲಿ ಹೆಸರು ವಾಸಿಯಾಗಿದ್ದನು. ಯಾವುದರಲ್ಲಿ ಹೆಸರುವಾಸಿಯಾಗಿದ್ದನೆಂದರೆ, ಸ್ವಲ್ಪವೂ ದಾನ ಗುಣವಿಲ್ಲದ ಧನಿಕನೆಂಬುದರಲ್ಲಿ! ಅಂತಲೇ ಯಾವ ಭಿಕ್ಷುಕನೂ ಸಹ ಅವನ ಮನೆಯ ನೆರಳಿಗೂ ಬರುತ್ತಿರಲಿಲ್ಲ.

ಒಂದುಸಾರಿ ಮಳೆಬಾರದೆ ಆ ಪ್ರಾಂತದಲ್ಲಿ ಬರಗಾಲವೇರ್ಪಟ್ಟಿತು. ಗ್ರಾಮದಲ್ಲಿ ಅಲ್ಪಸ್ವಲ್ಪ ಸ್ಥಿತಿವಂತರಾಗಿದ್ದವರು ಕನಿಕರಗೊಂಡು, ತಾವೇ ಮುಂದಾಗಿ, ಅಷ್ಟಷ್ಟು ಧಾನ್ಯಗಳನ್ನು ಹೊಂದಿಸಿ, ಮನೆಗಿಷ್ಟು ಧಾನ್ಯವೆಂಬ ರೀತಿಯಲ್ಲಿ ವಂತಿಗೆ ಕೂಡಿಸಿ, ಬರದ ಬನ್ನದಲ್ಲಿ ಬಾಡಿ ಬಳಲುವ ಬಡಬಗ್ಗರಿಗೆ ಹಂಚಲಿಕ್ಕೂ ಸಿದ್ಧರಾದರು. ಆ ರೀತಿಯಲ್ಲಿ ಅವರು ಬಾಬಣ್ಣನ ಬಳಿಗೂ ಬಂದು ಸಂಗತಿಯನ್ನು ವಿವರಿಸಿ, ಅವನ ವಂತಿಗೆಯನ್ನೂ ಕೊಡಬೇಕೆಂದು ಕೇಳಿದರು.

ಅದನ್ನೆಲ್ಲ ಕೇಳಿ ಬಾಬಣ್ಣ ಕೋಪದಿಂದ, "ಈ ಬಗೆಯ ದಂಡ ಧರ್ಮಗಳಿಗೆಲ್ಲ ಅರ್ಥವಿಲ್ಲವೆಂದು ನಾನು ನಿಶ್ಚಯವಾಗಿ ತಿಳಿದಿದ್ದೇನೆ. ನಿಮ್ಮ ವಿವರಣೆಗಳಾವುದೂ ನನಗೆ ಬೇಕಿಲ್ಲ. ಯಾರ ಕರ್ಮ ಹೇಗಿದೆಯೋ, ಅವರವರವರ ಅನುಭವಕ್ಕೇ ಬಿಡಬೇಕು. ಇನ್ನೊಬ್ಬರನ್ನು ಎಳೆಯುವುದು ಮಹಾ ಪಾಪ. ನಾನು ಕಷ್ಟಪಟ್ಟು ಸಂಪಾದಿಸಿದ್ದು ಹೀಗೆ ಕಂಡಕಂಡವರಿಗೆ ಧರ್ಮ ಮಾಡಲಿಕ್ಕೇನು? ವಂತಿಗೆ ಚಂದಾ ಮುಂತಾದ ಗೊಡವೆ ನನ್ನ ಹತ್ತಿರ ತರಲೇ ಬೇಡಿ" ಎಂದು ಖಂಡ ತುಂಡಾಗಿ ಹೇಳಿ ಬಿಟ್ಟನು.

ಈ ಜಿಪುಣನ ಹತ್ತಿರವಾದಿಸಿ ಲಾಭವಿಲ್ಲವೆಂದುಕೊಂಡು, ಬಂದವರು ಒಳಗೊಳಗೇ ಬಾಬಣ್ಣನನ್ನು ಬಯ್ದುಕೊಂಡು ಹೊರಟು ಹೋದರು.

ಆಮೇಲೆ ಕೆಲವು ವಾರಗಳು ಕಳೆದ ತರುವಾಯ —ಆ ಗ್ರಾಮಕ್ಕೆ ಒಬ್ಬ ಮಹಾ ಸಾಧು ಬಂದು ರಾಮಾಲಯದಲ್ಲಿ ಆಶ್ರಯ ಪಡೆದನು. ಆತನ ರೂಪಾಕೃತಿಯೂ, ತೇಜಸ್ಸೂ, ಭಕ್ತಿ, ಶ್ರದ್ಧೆಗಳೂ ಎಲ್ಲರಲ್ಲಿಯೂ ಗೌರವ ಹುಟ್ಟಿಸಿದ್ದುವು.

ಅವನು ಹಗಲೆಲ್ಲಾ ಪೂಜೆಯಲ್ಲಿಯೂ ಧ್ಯಾನದಲ್ಲಿಯೂ ಕಾಲ ಕಳೆಯುತ್ತಿದ್ದನು. ರಾಮಾಲಯದ ಅರ್ಚಕನು ಕೊಡುವ ಹಣ್ಣು ಹಂಪಲ, ಅಭಿಷೇಕದ ಹಾಲು ನೀರುಗಳ ಹೊರತು ಮತ್ತೇನೂ ಸ್ವೀಕರಿಸುತ್ತಿದ್ದಿಲ್ಲ. ರಾತ್ರಿಯಲ್ಲಿ ಆಲಯಕ್ಕೆ ಬಂದವರಿಗೆ

ಎನ್. ಜಾನಕಿ

ತತ್ತ್ವೋಪದೇಶಗಳನ್ನೂ, ಪುರಾಣ ಕಥೆಗಳ ಉದಾಹರಣೆಗಳನ್ನೂ, ಯಾರಾದರೂ ಧರ್ಮಸಂದೇಹಗಳಿಗೆ ಕೇಳುವ ಪ್ರಶ್ನೆಗಳಿಗೆ ತಕ್ಕ ಉತ್ತರಗಳನ್ನೂ ಕೊಡುವನು. ಅವನ ಉಪದೇಶಗಳನ್ನು ಕೇಳಿ ಹೋಗುವವರಿಗೆ ಒಳ್ಳೆಯ ತೃಪ್ತಿಯುಂಟಾಗುತ್ತಿತ್ತು.

ಅವನು ಅರ್ಚಕನು ಕೊಡುವ ದೇವರ ಪ್ರಸಾದಗಳ ಹೊರತು, ಯಾರೇನು ತಂದುಕೊಟ್ಟರೂ ಸ್ವೀಕರಿಸುತ್ತಿದ್ದಿಲ್ಲ. ಹಣ ಕಾಸುಗಳನ್ನೂ ಮುಟ್ಟುತ್ತಿದ್ದಿಲ್ಲ. ಯಾರಾದರೂ ಏನಾದರೂ ತಂದುಕೊಟ್ಟರೆ, "ಅಯ್ಯಾ, ಇದೆಲ್ಲಾ ನನಗೇಕೆ ? ತೆಗೆದುಕೊಂಡು ಹೋಗಿರಿ. ನೀವೇ ಉಪಯೋಗಿಸಿಕೊಳ್ಳಿ. ಸರ್ವೇ ಜನಾಃ ಸುಖಿನೋಭವಂತು" ಎಂದು ಹೇಳಿ ಕೈಯಿಂದ ಮುಟ್ಟುವನು ಮಾತ್ರ. ಅವನು ಮುಟ್ಟಿದ ಮಾತ್ರಕ್ಕೆ ಜನರಿಗೂ ತೃಪ್ತಿ.

ಈ ಬಗೆಯ ಆ ಸಾಧುವಿನ ನಿಸ್ಪೃಹ ಪ್ರವರ್ತನೆಯಿಂದ ಊರವರಿಗೆ ಅವನ ಮೇಲೆ ಭಕ್ತಿ ಶ್ರದ್ಧೆಗಳು ಇಮ್ಮಡಿಯಾದುವು. ಅವನು ಬೇಡವೆನ್ನುವನೆಂದು ಗೊತ್ತಿದ್ದರೂ ಜನರು ಅವನ ಮುಂದೆ ಇನ್ನಿಷ್ಟು ಹೆಚ್ಚಿಗೇ ಕಾಣಿಕೆಗಳನ್ನು, ತಂದಿಟ್ಟು ಮುಟ್ಟಿಸಿ ಪ್ರೋಕ್ಷಣೆ ಮಾಡಿಸಿಕೊಂಡು ಹಿಂದೆ ಒಯ್ಯುತ್ತಿದ್ದರು.

ಪಟ್ಟೆಯ ಬಟ್ಟೆಗಳನ್ನು ನೇಯುವ ವೆಂಕಟಸ್ವಾಮಿ, ಆತನಿಗೆ ಒಂದು ಪಟ್ಟೇ ವಸ್ತ್ರವನ್ನು ತಂದು ಭಕ್ತಿಯಿಂದ ಸಮರ್ಪಿಸಿದನು. ಸಾಧು ಅದಕ್ಕೆ ಕಮಂಡಲು ಜಲ ಪ್ರೋಕ್ಷಿಸಿ ಮುಟ್ಟಿ ತೆಗೆದುಕೊಂಡು ಹೋಗಲು ಹೇಳಿದನು.

ಚಿನ್ನದ ಆಚಾರಿಯಾದ ಗುರುಮೂರ್ತಿ ಆ ಸಾಧುವಿಗಾಗಿ ಎರಡು ಕರ್ಣಕುಂಡಲಗಳನ್ನು ಬಹುಮಾನವಾಗಿ ತಂದು ಮುಂದಿಟ್ಟನು. ಅವುಗಳನ್ನೂ ಆ ಸಾಧು ಸ್ವೀಕರಿಸದೆ ಮುಟ್ಟಿ ಹಿಂದಿರುಗಿಸಿದನು.

ಹೀಗೆಯೇ ಅನೇಕ ಶ್ರೀಮಂತರು, ಕಾವಡಿಗಳಲ್ಲಿ ಕೂಡಾ ಧವಸ ಧಾನ್ಯಗಳನ್ನು ತಂದುಕೊಂಡು, ಹಿಂದೆ ಒಯ್ದಿದ್ದರು.

ಹೀಗೆ ಆ ಸಾಧುವಿನ ಗೌರವವು ಮತ್ತಿಷ್ಟು ಹೆಚ್ಚಾಯಿತು. ಆತನು ಕೈಯಿಂದ ಮುಟ್ಟಿದ ಕಾಣಿಕೆ



ವಸ್ತುಗಳನ್ನು ಮನೆಗೆ ತಂದುಕೊಂಡರೆ ತುಂಬಾ ಅಭಿವೃದ್ಧಿಯಾಗುತ್ತದೆಂದು ಊರೊಳಗೆಲ್ಲರೂ ಮಾತಾಡಿಕೊಳ್ಳತೊಡಗಿದರು.

ರಾಮಾಲಯದಲ್ಲಿ ತಂಗಿರುವ ಮಹಾಸಾಧುವನ್ನು ಕುರಿತು ವಾರ್ತೆಗಳನ್ನು ಕೇಳುತ್ತಾ ಇದ್ದ ಬಾಬಣ್ಣನಿಗೆ ಒಂದು ಆಲೋಚನೆ ಬಂದಿತು: ಆ ಸಾಧುವಿನಿಂದ ಮುಟ್ಟಿ ಪ್ರೋಕ್ಷಣೆ ಪಡೆಯುವುದರ ಮೂಲಕ ತನ್ನ ಸಂಪತ್ತನ್ನು ಹತ್ತು ಪಾಲು ಹೆಚ್ಚುಗೊಳಿಸಬೇಕೆಂದು ತೋರಿತು. ಆದ್ದರಿಂದ ತಾನೇನೂ ದೊಡ್ಡ ಜಿಪುಣನಲ್ಲವೆಂದೂ, ಸಾಧುಸಂತರಿಗೆ ಧಾರಾಳವಾಗಿ ದಾನ ಮಾಡುವವನೆಂದೂ ತಿಳಿದುಕೊಳ್ಳುವವರು ತಿಳಿದುಕೊಳ್ಳುತ್ತಾರೆ. ಅಂತೆಯೇ ಅವನು ನವಧಾನ್ಯಗಳ ಹತ್ತು ಹತ್ತು ಚೀಲಗಳನ್ನೂ, ಹತ್ತು ಸಾವಿರ ರೂಪಾಯಿಗಳನ್ನೂ, ಹತ್ತು ಪವನುಗಳಷ್ಟಾಗುವ ಒಂದು ಚಿನ್ನದ ಗಟ್ಟಿ ಸಹಾ ಇರಿಸಿದ ಪೆಟ್ಟಿಗೆಯನ್ನೂ ಗಾಡಿಯ ಮೇಲೆ ಹಾಕಿಕೊಂಡು, ಸಾಧುವಿನ ಹತ್ತಿರ ಹೋಗಿ ತನ್ನ ಹೆಸರು ಹೇಳಿ ಸಾಷ್ಟಾಂಗ ಪ್ರಣಾಮ ಮಾಡಿ, "ತಮ್ಮಂತಹ ಮಹನೀಯರ ದರ್ಶನವು ಸಾಕ್ಷಾತ್ ದೇವರ ದರ್ಶನಕ್ಕೆ ಸಮ. ಬರಿಗೈಯಿಂದ ಮಹಾತ್ಮರ ದರ್ಶನಕ್ಕೆ ಬರಬಾರದೆಂದು ಹಿರಿಯರು ಹೇಳುತ್ತಾರೆ. ತಾವು ಈ ಭಕ್ತನ ಮೇಲೆ ದಯವಿಟ್ಟು ಈ ಗಾಡಿಯಲ್ಲಿ ತಂದ ಅಲ್ಪ ಕಾಣಿಕೆಗಳನ್ನು ಸ್ವೀಕರಿಸಿ ನನ್ನನ್ನು ಧನ್ಯನಾಗಿ ಮಾಡಬೇಕು." ಎಂದನು.

ಸಾಧು ಈ ಜಿಪುಣಾಗ್ರೇಸರ ಬಾಬಣ್ಣನನ್ನು ಕುರಿತು ಕೇಳಿದ್ದನು. ಬಾಬಣ್ಣನ ಉಪಾಯವೂ ಅರ್ಥ ಮಾಡಿಕೊಂಡನು. ಆತನು ನಸುನಗುವಿನೊಂದಿಗೆ "ಶ್ರೀರಾಮನ ದಯ ! ನನ್ನ ವ್ರತದೀಕ್ಷೆ ಈ ದಿನಕ್ಕೆ ಮುಗಿಯಿತು. ಶ್ರೀರಾಮನ ಪ್ರೇರಣೆಯಂತೆ ನೀನು ತಂದ ಕಾಣಿಕೆಗಳನ್ನು ಸ್ವೀಕರಿಸುತ್ತೇನೆ." ಎಂದು ಕಮಂಡಲುವಿನ ನೀರನ್ನು ಗಾಡೀ ಸಾಮಾನುಗಳ ಮೇಲೆ ಪ್ರೋಕ್ಷಿಸಿ, ಅಲ್ಲಿರುವ ಭಕ್ತರೊಂದಿಗೆ. "ಅಪ್ಪಗಳಿರಾ ! ನನ್ನ ವ್ರತದೀಕ್ಷಾ ಸಮಾಪ್ತಿಯ ಅಂಗವಾಗಿ ನನ್ನ ಮೂಲಕ ಶ್ರೀರಾಮನು ಮಾಡಿಸುವ ಈ ದಾನವನ್ನು, ಊರೊಳಗಿನ ಬಡಬಗ್ಗರಿಗೆ ಹಂಚಿ ಕೊಡಿರಿ !" ಎಂದನು.

ಬಾಬಣ್ಣ ಮರಗಟ್ಟಿದಂತೆ ನೋಡುತ್ತಿರಲು, ಜನರು ಗಾಡಿಯಲ್ಲಿದ್ದ ಚೀಲಗಳನ್ನು ರಾಮಾಲಯದ ಮುಂದೆ ಇಳಿಸಿದರು. ಅವುಗಳ ವಿನಿಯೋಗವು ಕ್ರಮವಾಗಿ ನಡೆಯಿತು. ಬಡವರಿಗೆ ಧಾನ್ಯಗಳೊಂದಿಗೆ ಚಿಲ್ಲರೆ ಹಣವೂ ಸಿಕ್ಕಿತು. ದೇವಾಲಯದ ಸೀತಾರಾಮ ವಿಗ್ರಹಗಳಿಗೆ ಚಿನ್ನದ ಆಭರಣಗಳೂ ಅಲಂಕೃತವಾದುವು. ಜನರೆಲ್ಲಾ ಆ ಸಾಧುವನ್ನೂ, ಬಾಬಣ್ಣನನ್ನೂ ಬಾಯಿ ತುಂಬಾ ಹೊಗಳಿದರು.






## ೧೧

[ಚತುರ್ನೇತ್ರನೂ ಸಮರಸೇನಾದಿಗಳೂ ಗುಡ್ಡದ ಮೇಲಿರುವಾಗ, ಅಲ್ಲಿಗೇ ಬರುತ್ತಿದ್ದ ಕುಂಭಾಂಡನನ್ನೂ ಅವನ ಜತೆಯ ಆಟವಿಕರನ್ನೂ, ಮತ್ತೊಂದು ಕಡೆಯಿಂದ ಬಂದ ಏಕಾಕ್ಷಿ ಮಾಂತ್ರಿಕನು ಅಡ್ಡಗಟ್ಟಿದನು. ಆಗಲೇ ಸಮರಸೇನನೂ, ಕುಂಭಾಂಡನ ಮೇಲೆ ಧಾವಿಸಿ ಬಿದ್ದನು. ದೊಂಬಿಯುದ್ಧದಲ್ಲಿ ಕೆಲವರು ಸಾಯಲು, ತೋಳಗಳ ಗುಂಪು ಅಲ್ಲಿಗೆ ಓಡಿ ಬರುವುದನ್ನು ತಿಳಿದು ಎಲ್ಲರೂ ಓಡಿದರು.]

ಸಮರಸೇನನೂ ಅವನ ಸೈನಿಕರೂ ಸ್ವಲ್ಪ ದೂರದ ವರೆಗೆ ಓಡಿದರು. ಕುಂಭಾಂಡನ ಕಡೆಯ ಆಟವಿಕರ ಕೂಗು ದೂರ ದೂರವಾದುದನ್ನು ನೋಡಿ, ತಮ್ಮ ದಿಕ್ಕಿನಲ್ಲಿ ಅವರಿಲ್ಲವೆಂದು ಸಮರಸೇನಾದಿಗಳಿಗೆ ಗೊತ್ತಾಗಿ ತುಸುಧೈರ್ಯ ಬಂದಿತು. ಓಡುತ್ತಾ ಆಯಾಸದಿಂದ ಒಂದು ಕಡೆಯಲ್ಲಿ ಸ್ವಲ್ಪ ಶ್ವಾಸ ಬಿಡುತ್ತಾ, ನಿಂತು ಸುತ್ತಲೂ ಗಮನಿಸತೊಡಗಿದರು. ತೋಳಗಳು ಹೋರಾಟದಲ್ಲಿ ಸತ್ತವರನ್ನು ತಿಂದು ತೀರಿಸುವುದರಲ್ಲಿ ಮಗ್ನವಾದುದರಿಂದ ಇನ್ನು ಅವು ತಮ್ಮನ್ನು ಅನುಸರಿಸಿ ಬರಲಾರವೆಂದು ದೃಢ ವಾಯಿತು. ಕುಂಭಾಂಡನೂ ಅವನ ಕಡೆಯ ಆಟವಿಕರೂ ತೋಳಗಳಿಂದ ತಪ್ಪಿಸಿಕೊಂಡು ಗುಡ್ಡದ ಕೆಳಗಿನ ಅಡವಿಯ ಕಡೆಗೆ ಓಡುತ್ತಿರುವಂತೆ ಅವರ ಸದ್ದು ಆ ಕಡೆಗೆ ದೂರ ದೂರ ಹೋಗುತಿತ್ತು. ಆದರೆ ಏಕಾಕ್ಷಿ ಮಾಂತ್ರಿಕನೂ, ಚತುರ್ನೇತ್ರನೂ ಎತ್ತ ಮಾಯವಾದರೆಂದು ಗೊತ್ತಾಗಲಿಲ್ಲ. ತೋಳಗಳು ಮಾತ್ರ ಒಂದೇ ಕಡೆಯಲ್ಲಿ ಕೂಗುತ್ತಿರುವುದು ಕೇಳುತ್ತಿತ್ತು. ಹಾಗಾದರೆ ಮಾಂತ್ರಿಕರಿಬ್ಬರೂ ಒಬ್ಬರನ್ನೊಬ್ಬರು ಭಂಗಿಸುವುದರಲ್ಲಿ ಮಗ್ನರಾಗಿ ಬಹುದೆ? ಸದ್ಯ ಭಯವಿಲ್ಲವೆಂದು ತಿಳಿದ ಮೇಲೆ




ಸಮರಸೇನನೂ, ಸೈನಿಕರೂ ಒಂದು ಮರದಬುಡದಲ್ಲಿ ಕುಳಿತರು. ಸಮರಸೇನನ ತಲೆಯಲ್ಲಿ ಆಲೋಚನೆ ಹರಿಯಿತು. ಕುಂಭಾಂಡನು ಕೂಡಾ ಧನರಾಶಿಯ ನಾವೆಯನ್ನು ವಶಪಡಿಸಿಕೊಳ್ಳಬೇಕೆಂದು ಗಟ್ಟಿ ಪ್ರಯತ್ನಮಾಡುತ್ತಿದ್ದಾನೆಂದು ಅರ್ಥವಾಯಿತು. ಈಗ ಆ ನಾವೆಯನ್ನು ಹೊಂಚುಹಾಕುವವರು ತಾನೊಬ್ಬ, ಕುಂಭಾಂಡನಿನ್ನೊಬ್ಬ, ಮೂರನೆಯವನು ಏಕಾಕ್ಷಿ. ನಾಲ್ಕನೆಯವನು ಚತುರ್ನೇತ್ರ, ಹೀಗೆ ನಾಲ್ವರಾಯಿತು! ಇದರಲ್ಲಿ ತನಗೆ ಜಯವಾಗ ಬೇಕಾದರೆ ಮೊದಲು ಕುಂಭಾಂಡನನ್ನೇ ನಿವಾರಿಸ ಬೇಕೆಂದು ಸಮರಸೇನನಿಗೆ ತೋರಿತು.

ಸಮರಸೇನನು ಹೀಗೆ ಆಲೋಚಿಸಿಕೊಂಡಿರಲು, ಅವನ ಸೈನಿಕರು ಮಾತ್ರ ಎಷ್ಟು ಬೇಗ ತಮ್ಮ ದ್ವೀಪಕ್ಕೆ ಹೋಗುತ್ತೇವೋ, ಅದಕ್ಕೆ ದಾರಿ ಯಾವುದೋ ಎಂಬ ಚಿಂತೆಯಿಂದ, ಬಾಯಿಬಿಟ್ಟು ಹೇಳಲಾಗದೆ ಮಿಡುಕಿಕೊಂಡಿದ್ದರು.

ಕಡೆಗೆ ಒಬ್ಬನು ಧೈರ್ಯಮಾಡಿ ಬಾಯಿತೆರೆದು, "ಸೇನಾನೀ ದೊರೆಗಳೇ, ನಾವು ಈ ಭಯಂಕರ ದ್ವೀಪವನ್ನು ಎಷ್ಟುಬೇಗ ಬಿಟ್ಟು ಹೋದರೆ ಅಷ್ಟು ಒಳ್ಳೆಯದು. ಅದಕ್ಕೆ ತಕ್ಕ ಪ್ರಯತ್ನ ಮಾಡ ಬೇಕಾಗಿದೆ. ಇಲ್ಲಿ ಹೊತ್ತು ಕಳೆದಷ್ಟೂ ಏನೇನೋ ಅಪಾಯಗಳು ಎದುರಾಗುತ್ತವೆ" ಎಂದನು.

"ಹೌದೌದು" ಎಂದು ಗಂಟಲಲ್ಲೇ ಹೇಳುತ್ತ ಉಳಿದವರೂ ತಲೆಯಾಡಿಸಿದರು. ಅವರ ಮನಸ್ಸನ್ನು ಅರ್ಥ ಮಾಡಿಕೊಂಡ ಸಮರಸೇನನು "ಅದೇನೋ ನಿಜವೇ ಆದರೂ ಅವಸರ ಪಟ್ಟರೆ ಏನೂ ಆಗದು. ಈ ದ್ವೀಪದಿಂದ ಹೊರಟು ಹೋಗುವುದೇ ಮುಖ್ಯ ವೆಂಬುದನ್ನು ಯಾವಾಗಲೋ ನಿರ್ಧರಿಸಿದ್ದೇವೆ. ಈಗ ಈ ಸ್ಥಳದಲ್ಲಿ ಇರುವುದು ಕೂಡಾ ಆ ಪ್ರಯತ್ನದಲ್ಲೇ ತಾನೇ? ಅದನ್ನು ಕುರಿತು ಪದೇ ಪದೇ ಯೋಚಿ ಸುವುದರಲ್ಲಿ ಪ್ರಯೋಜನವಿಲ್ಲ. ಅಸಲು ಪ್ರಶ್ನೆ ಈ ದ್ವೀಪವನ್ನು ಬಿಟ್ಟು ಹೋಗಲು ದಾರಿ ಯಾವುದು ಎಂಬುದೇ. ಅದಿನ್ನೂ ನಮಗೆ ಸಿಕ್ಕಿಲ್ಲವಲ್ಲಾ? ಯಾವ ದಿಕ್ಕಿಗೆ ಹೋದರೆ ಒಳ್ಳೆಯದೆಂಬುದನ್ನು ನೀವಾದರೂ ಹೇಳಬಲ್ಲಿರಾ?" ಎಂದನು.

ದ್ವೀಪದಿಂದ ಹೊರ ಬೀಳುವ ಮಾರ್ಗ ಯಾವು ದೆಂದು ಸೈನಿಕರಿಗಾದರೂ ಪ್ರತ್ಯೇಕವಾಗಿ ಏನೂ ಗೊತ್ತಿಲ್ಲ. ತಾವು ಸಮುದ್ರದ ತೀರದಲ್ಲಿ ಬಿಟ್ಟು ಬಂದ ಹಡಗುಗಳು ಯಾವ ಸ್ಥಿತಿಯಲ್ಲಿವೆ? ಅವು ಗಳೊಂದಿಗೆ ಇರುವವರ ಸ್ಥಿತಿ ಏನಾಗಿದೆ? ಯಾವುದೂ ತಿಳಿಯದು. ಅದರೆಡೆಯಲ್ಲಿ ಮಹಾದ್ರೋಹಿಯಾಗಿ ಇಲ್ಲಿಗೆ ಬಂದಿರುವ ಕುಂಭಾಂಡನಿಂದ ಕೇಡುಬಾರ ದಂತೆ ನೋಡಿಕೊಳ್ಳಬೇಕು. ತಮಗಿಂತಲೂ ಬಲ ವಾಗಿ ಅವನಿಗೆ ಈ ದ್ವೀಪವಾಸಿಗಳ ಸಹಕಾರ ಬೇರೆ ಲಭಿಸಿದೆ. ರಾಜಕುಲದೇವತೆಯಾದ ಕುಂಡಲಿನೀದೇವಿಯ ದಯೆ ಹೇಗಿದೆಯೋ! ಎಲ್ಲವೂ ಉತ್ತರವಿಲ್ಲದ ಪ್ರಶ್ನೆಗಳೇ.

"ದೊರೆಗಳೇ! ನಾವು ಇಲ್ಲಿಂದ ತಪ್ಪಿಸಿಕೊಂಡು ಹೋಗಲು, ಚತುರ್ನೇತ್ರ ಮಾಂತ್ರಿಕನು ಸಹಾಯ ಮಾಡಿದರೆ ಮಾಡಬೇಕು. ಅವನನ್ನು ಸ್ಪಷ್ಟವಾಗಿ ಕೇಳಿ ನೋಡುವುದು ಒಳ್ಳೆಯದಲ್ಲವೆ?" ಎಂದು ಒಬ್ಬ ಸೈನಿಕನು ಮೆಲ್ಲನೆ ದನಿ ತೆಗೆದನು.

"ನಮ್ಮ ಮನಸ್ಸು ಚತುರ್ನೇತ್ರನಿಗೆ ಕೇಳದೆಯೇ ಗೊತ್ತಾಗಿದೆಯೆಂದು ನನಗೆ ಕಾಣುತ್ತದೆ" ಎಂದನು ಸಮರ ಸೇನ. ತಮ್ಮನ್ನೆಲ್ಲ ಈ ಭಯಂಕರ ದ್ವೀಪದಿಂದ ಕುಂಡಲಿನೀ ದ್ವೀಪಕ್ಕೆ ಸೇರಿಸಿ ಬಿಡಯ್ಯಾ ಎಂದು ದೀನತೆಯಿಂದ ಚತುರ್ನೇತ್ರನನ್ನು ಪ್ರಾರ್ಥಿಸುವುದು ಹೇಡಿಯ ಲಕ್ಷಣವೇ ಹೊರತು ವಿವೇಕವೆನಿಸಲಾರದು. ಅಲ್ಲದೆ ಚತುರ್ನೇತ್ರನಿಗಾದರೂ ಅದು ಸಾಧ್ಯವೇ ಎಂಬ ಅನುಮಾನವು ಸಮರ ಸೇನನಿಗಿತ್ತು.

ಅವರು ಹೀಗೆ ಆಲೋಚನೆಯ ಗುಂಗಿನಲ್ಲಿದ್ದಾಗ ರಿವ್ವನೆ ಬಂದ ಬಾಣವೊಂದು ಸಮರಸೇನನ ತಲೆಗೆ ಒಂದಡಿ ಎತ್ತರದಲ್ಲಿ ಸಾಗಿ, ಮರದಕಾಂಡಕ್ಕೆ ಚುಚ್ಚಿಕೊಂಡಿತು. ಮರುಕ್ಷಣವೇ ಸಮರಸೇನನು ಹಾರಿ ನಿಂತು, "ಎಲ್ಲರೂ ಮರದ ಹಿಂದೆ ತಪ್ಪಿಸಿಕೊಳ್ಳಿರಿ! ಇದು ದ್ರೋಹಿ ಕುಂಭಾಂಡನೇ! ಅವನು ಇಲ್ಲೆಲ್ಲೋ ಹೊಂಚಿಕೊಂಡಿದ್ದು; ನಮ್ಮನ್ನು ಹತ ಮಾಡಲು ನೋಡುತ್ತಿದ್ದಾನೆ!" ಎನ್ನುತ್ತ ಸಮೀಪದಲ್ಲಿದ್ದ ಮರಗಳ ಗುಂಪಿನ ಕಡೆಗೆ ಓಡಿದನು.

ಸೈನಿಕರು ಕೂಡಾ ತಮ್ಮ ನಾಯಕನನ್ನು ಅನುಸರಿಸಿ ಓಡಿದರು. ಆಗ ಹಿಂದಿನಿಂದ, "ಅಗೋ! ಓಡುತ್ತಿದ್ದಾರೆ! ಹಿಡಿಯಿರಿ! ಜೀವದಿಂದ ಬಿಡ ಬೇಡಿ! ಹೊಡೆದು ಹಾಕಿರಿ!" ಎಂದು ಕುಂಭಾಂಡನ ಬೊಬ್ಬೆ ಕೇಳಿಸಿತು.

ಆದರ ಬೆನ್ನಿಗೆ ನಿಃಶಬ್ದವಾಗಿದ್ದ ಆ ಪ್ರದೇಶವೆಲ್ಲ ಕರ್ಕಶ ಶಬ್ದಗಳಿಂದ ತುಂಬಿತು. ಈಟಿಗಳನ್ನು ಹಿಡಿದು ಅಡಗಿಕೊಂಡಿದ್ದ ಆಟವಿಕರು ಮರಗಳ ಮರೆಯಿಂದಲೂ ಬಂಡೆಕಲ್ಲುಗಳ ಮರೆಯಿಂದಲೂ ಹೊರಬಿದ್ದು ಓಡಿಸಿಕೊಂಡು ಬರತೊಡಗಿದರು. ಸಮರಸೇನನಿಗೆ ಬಹಳ ದೊಡ್ಡ ಪ್ರಾಣಾಪಾಯ





ದಲ್ಲಿ ಸಿಕ್ಕಿಬಿದ್ದಿರುವಂತೆ ತೋರಿತು. ತಾನು ಕೇವಲ ಐದು ಮಂದಿ ಸೈನಿಕರೊಂದಿಗೆ, ಎಲ್ಲಾ ಕಡೆಯಿಂದ ಮುತ್ತಿಕೊಂಡು ಬರುವ ಕ್ರೂರರಾದ ಆಟವಿಕರನ್ನು ತಡೆಯಲು ಸಾಧ್ಯವಿಲ್ಲವೆಂಬುದು ಕಟುಸತ್ಯ. ಕ್ರೂರನಾದ ಕುಂಭಾಂಡನು ಆಟವಿಕರನ್ನು ಹುರಿದುಂಬಿಸುತ್ತ ಬೆಂಬತ್ತಿಕೊಂಡೇ ಇದ್ದಾನೆ! ಅವನು ದೂರ ಹೋದನೆಂದು ತಾನು ಭಾವಿಸಿದ್ದು ಎಂತಹ ತಪ್ಪಾಗಿ ಹೋಯಿತು!

ಸಮರಸೇನಾದಿಗಳು ಓಡುತ್ತಾ, ಗುಂಪಾಗಿ ಬೆಳೆದ ಮರಗಳ ಅಡಿಯ ಕತ್ತಲೆಯಲ್ಲಿ ಅಡಗುತ್ತ, ಮತ್ತೆ ಅಲ್ಲಿಂದ ಓಡುತ್ತಾ, ಸ್ವಲ್ಪ ದೂರದವರೆಗೆ ಹೋದರು. ಅಷ್ಟು ಹೊತ್ತಿಗೆ ಕರಿಮೋಡದಿಂದಾಗಿ ಚಂದ್ರ ಪ್ರಕಾಶವು ತಗ್ಗಿ ಕ್ರಮವಾಗಿ ಕತ್ತಲೆ ಆವರಿಸಿಕೊಂಡು ಬಂದುದರಿಂದ, ಸಮರಸೇನನಿಗೆ ಕುಂಭಾಂಡನ ಕಡೆಯ ಆಟವಿಕರ ಕಣ್ಣಿಗೆ ಬೀಳದಂತೆ ತಪ್ಪಿಸಿಕೊಳ್ಳಲು ಅನುಕೂಲವಾಯಿತು.

ಕಡೆಗೆ ಎಲ್ಲರೂ ಒಂದಾನೊಂದು ಗುಡ್ಡದ ಗುಹೆಗಳ ಹತ್ತಿರ ಸೇರಿದರು. ಕುಂಭಾಂಡನೂ ಆಟವಿಕರೂ ಇನ್ನೂ ತಮ್ಮ ಶೋಧನೆಯಲ್ಲಿರುವರೆಂದು ಅವರ ಕೂಗುಗಳಿಂದ ತಿಳಿದು ಬರುತ್ತಿತ್ತು. ತಾವು ಇನ್ನೂ ಎಲ್ಲೆಲ್ಲೋ ಓಡುವುದಕ್ಕಿಂತಲೂ, ಸಮೀಪದಲ್ಲಿರುವ ಯಾವುದಾದರೂ ಗುಹೆಯೊಳಗೆ ಪ್ರವೇಶಿಸಿ, ರಾತ್ರಿಯನ್ನು ಅಲ್ಲಿ ಕಳೆಯುವುದು ಒಳ್ಳೆಯದೆಂದು ಸಮರಸೇನನಿಗೆ ತೋರಿತು.

ಅವನು ಒಂದು ಗುಹೆಯ ಮುಂದೆ ನಿಂತು ಅದರೊಳಗೆ ಪರೀಕ್ಷಿಸಿ ನೋಡ ತೊಡಗಿದನು. ಸೈನಿಕರು ತಮ್ಮ ನಾಯಕನ ಆಲೋಚನೆಯನ್ನು ತಿಳಿದು ಗುಹೆಯೊಳಗೆ ನುಸುಳಲು ಮುಂದಡಿ ಇಡುವಾಗ, ಸಮರಸೇನನು ಅವರನ್ನು ತಡೆದು "ಅವಸರಪಡಬೇಡಿ. ನಿಲ್ಲಿ!" ಎಂದು ಎಚ್ಚರಿಸಿದನು.

"ಯೋಚನೆ ಗೀಚನೆ ಏನಿಲ್ಲದೆ ಒಮ್ಮೆಗೇ ಇಂಥ ಗುಹೆಯೊಳಗೆ ಹೊಕ್ಕುಬಿಡುವುದು ಒಳ್ಳೆಯದಲ್ಲ. ಸಿಂಹದಂಥ ಕ್ರೂರ ಮೃಗವಾವುದಾದರೂ ಇರಲಿಕ್ಕೂ ಸಾಕು. ಪರೀಕ್ಷಿಸಿ ನೋಡದೆ ನುಸುಳಬಾರದು" ಎಂದನು ಸಮರಸೇನ.

"ಈಗ ಏನೋ ಒಂದು ಬೇಗನೇ ನಿರ್ಣಯಿಸಬೇಕಲ್ಲ ದೊರೆಗಳೇ! ಕಾಡು ಜನರು ನಮ್ಮನ್ನು ಹುಡುಕಿಕೊಂಡೇ ಇದ್ದಾರೆ!" ಎಂದು ಒಬ್ಬ ಸೈನಿಕನು ಹಿಂದಿರುಗಿ ನೋಡುತ್ತಾ ಹೇಳಿದನು.

"ಗುಹೆಯೊಳಗೆ ಮೃಗವೇನಾದರೂ ಇದೆಯೋ ಇಲ್ಲವೋ ಎಂಬುದನ್ನು ತಿಳಿಯುವುದಾದರೂ ಹೇಗೆ? ಇನ್ನೊಂದು ಗುಹೆಯ ಬಳಿಗೆ ಹೋದರೂ ಇದೇ ಸಮಸ್ಯೆ ತಾನೇ! ಕಲ್ಲು ಬಿಸುಡೋಣವೆ?" ಎಂದ ಇನ್ನೊಬ್ಬ ಸೈನಿಕ.

ಸೈನಿಕರ ಮಾತು ಕೇಳಿ ಸಮರಸೇನನು ಮುಗುಳು ನಗು ಸೂಸಿದನು. ತಾನು ಮುಂದಾಗಿ ಎಚ್ಚರಿಕೆ ಕೊಡದಿದ್ದರೆ ಇವರು ಹಿಂದು ಮುಂದು ನೋಡದೆ

ಗುಹೆಯೊಳಗೆ ನೊಕ್ಕು ಬಿಡುತ್ತಿದ್ದರು. ಒಂದು ವೇಳೆ ಒಳಗಿರುವ ಸಿಂಹದಂಥ ಯಾವುವೋ ಮೃಗದ ಹೊಟ್ಟೆಗೆ ಸೇರುತ್ತಿದ್ದರು.

ಸಮರಸೇನನು ಬಿಲ್ಲಿಗೆ ಬಾಣ ಹೂಡಿ, "ನೀವು ಕತ್ತಿಗಳೊಂದಿಗೆ ಸಿದ್ಧವಾಗಿರಿ. ನಾನು ಗುಹೆಯೊಳಗೆ ಬಾಣ ಬಿಡುತ್ತೇನೆ. ಒಂದು ವೇಳೆ ಒಳಗೆ ಯಾವುದಾದರೂ ಕ್ರೂರಮೃಗವಿದ್ದರೆ ಹಠಾತ್ತಾಗಿ ಕೆರಳಿಕೊಂಡು ಬರುತ್ತದೆ! ಜಾಗ್ರತೆ!" ಎಂದನು.

ಸೈನಿಕರು ಕತ್ತಿಯೊಂದಿಗೆ ತಯಾರಾಗಿ ನಿಂತರು. ಸಮರಸೇನನು ಒಂದು ಬಾಣವನ್ನು ಗುಹೆಯೊಳಗೆ ಪ್ರಯೋಗಿಸಿದನು. ಮರುಕ್ಷಣದಲ್ಲಿ ಅವನು ಊಹಿಸಿದ್ದು ನಿಜವಾಯಿತು. ಭಯಂಕರವಾಗಿ ಗರ್ಜಿಸುತ್ತ ಒಂದು ಸಿಂಹವು ಹೊರಕ್ಕೆಹಾರಿತು. ಆ ಕೂಡಲೇ ಸಿದ್ಧರಾಗಿದ್ದ ಸೈನಿಕರು ಅದರ ಮೇಲೆ ಕತ್ತಿಗಳನ್ನು ಬೀಸಿದರು. ನಾಲ್ಕಾರು ಕತ್ತಿಯ ಪೆಟ್ಟುಗಳನ್ನು ತಿಂದ ಆ ಸಿಂಹವು ಹೆದರಿ ಜೋರಿನಿಂದ ಗರ್ಜಿಸುತ್ತ ಕಾಡಿನಕಡೆಗೆ ಓಡಿ ಹೋಯಿತು.

ಸಮರಸೇನನು ಒಬ್ಬ ಸೈನಿಕನ ಕೈಯಿಂದ ಕತ್ತಿಯನ್ನು ತೆಗೆದುಕೊಂಡು ಗುಹೆಯೊಳಗೆ ಅಡಿ ತೆಗೆದಿಟ್ಟನು. ಉಳಿದ ಸೈನಿಕರು ಅವನನ್ನು ಅನುಸರಿಸಿದರು. ಗುಹೆಯೊಳಗೆ ಅದೊಂದೇ ಸಿಂಹವಿದ್ದಿತೆಂದು ಅವರು ನಂಬಿದರು. ಇನ್ನೂ ಇರುತ್ತಿದ್ದರೆ ಆಗಲೇ ಹೊರಗೆ ಬರಬೇಕಿತ್ತು. ಈ ಧೈರ್ಯದಿಂದ ಅವರು ಗುಹೆಯೊಳಗೆ ಹೊಕ್ಕಾಗ ಒಳಗಿನಿಂದ ಯಾವುದೋ ಕೂಗುತ್ತಿರುವಂತೆ ಶಬ್ದ ಕೇಳಿತು.

ಸಮರಸೇನನು ಒಂದಡಿ ಹಿಂದಕ್ಕಿಟ್ಟು, "ಗುಹೆಯೊಳಗೆ ಗಾಯಪಟ್ಟ ಇನ್ನೊಂದು ಸಿಂಹವಿರುವ ಹಾಗಿದೆ. ಅದು ಯಾವಸ್ಥಿತಿಯಲ್ಲಿರುವುದೋ ತಿಳಿಯದೆ ಒಳಗೆ ಹೋಗ ಕೂಡದು. ಬೇಗ ತರಗೆಲೆ ಪುರುಳೆಗಳನ್ನು ಸೇರಿಸಿ ಬೆಂಕಿಹಚ್ಚಿರಿ ನೋಡುವಾ" ಎಂದನು ಸೈನಿಕರಿಗೆ.




ಕೂಡಲೇ ಇಬ್ಬರು ಸೈನಿಕರು ಚಕಮುಕಿ ಕಲ್ಲು ಹೊಡೆದು ಗುಹೆಯಬಾಗಿಲು ಹತ್ತಿರ ಬೆಂಕಿ ಉರಿಸಿದರು. ಅದರಿಂದ ಬಟ್ಟೆದೊಂದಿಯ ಚಿಕ್ಕ ದೀವಿಟಿಗೆಯನ್ನು ಬೆಳಗಿಸಿ ಸಮರಸೇನನು ಮುಂದೆ ಹೋಗಿ ಗುಹೆಯ ಒಳ ಭಾಗವನ್ನು ಪರೀಕ್ಷಿಸಿ ನೋಡಿದನು. ಅಲ್ಲಿ ಬಾಣದ ಪೆಟ್ಟಿನಿಂದ ಹೊರನಾಡಿಕೊಂಡಿದ್ದ ಒಂದು ಸಿಂಹದ ಮರಿಯೂ, ಅದರ ಪಕ್ಕದಲ್ಲಿ ಹೆದರಿಕೆಯಿಂದ ಗುರುಗುಡುತ್ತಿದ್ದ ಇನ್ನೊಂದು ಸಿಂಹದ ಮರಿಯೂ ಇದ್ದುವು.

"ಸಣ್ಣ ಮರಿಗಳು. ಭಯವೇನಿಲ್ಲ. ಒಳಗೆ ಬನ್ನಿ" ಎಂದು ಸಮರಸೇನನು ಗುಹೆಯೊಳಗೆ ಹೋದನು.

ಸಿಂಹದ ಮರಿಗಳಲ್ಲಿ ಗಾಯವಾಗದಿದ್ದ ಸಿಂಹದ ಮರಿ ಮೆಲ್ಲನೆ ಗುರುಗುಡುತ್ತ, ಗುಹೆಯ ಹಿಂದಿನ ಭಾಗಕ್ಕೆ ಹೋಗ ತೊಡಗಿತು. ಸಮರಸೇನನು ಸಣ್ಣದನಿಯಿಂದ ಸಿಳ್ಳುಹಾಕುತ್ತ, ಗುಹೆಯ ಒಂದು ಮೂಲೆಯಲ್ಲಿ ಕುಳಿತನು. ಸೈನಿಕರು ಕೂಡಾ ಗುಹೆ

ಯೊಳಗೆ ಬಂದು, ಸುತ್ತಲೂ ನೋಡುತ್ತ ನಿಂತರು. ಅದುವರೆಗೆ ಬಹಳ ಹೊತ್ತಾಗಿದ್ದರೂ, ಕುಂಭಾಂಡನೂ ಅವನ ಕಡೆಯ ಆಟವಿಕರೂ ಇನ್ನೂ ಸಮರಸೇನನನ್ನು ಹುಡುಕಿಕೊಂಡಿದ್ದಾರೆಂದು ಆಗಾಗ ಕೇಳಿ ಬರುವ ಅವರ ಶಬ್ದಗಳಿಂದ ಗೊತ್ತಾಗುತ್ತಿತ್ತು. ಒಂದೆರಡುಬಾರಿ ಕತ್ತಲೆಯಲ್ಲಿ ಅವರು ಗುರುತು ತಿಳಿಯದೆ ತಮ್ಮವರನ್ನೇ ಹಿಡಿದು "ಸಿಕ್ಕಿದರೂ !" ಎಂದು ಕೂಗಿದ್ದೂ, "ನಾವಲ್ಲವೋ" ಎಂಬ ಮರುಕೂಗುಹಾಕಿದ್ದೂ ಕೇಳಿಸಿತು. "ಹೆಚ್ಚು ಕೂಗಬೇಡ್ರೋ !" ಎಂದು ಕುಂಭಾಂಡನೂ ಒಂದೆರಡು ಬಾರಿ ಎಚ್ಚರಿಸಿದನು.

ತಾವು ಅಡಗಿದ ಸ್ಥಳವು ಗೊತ್ತಾಗದಂತೆ ಸಮರಸೇನನು ಗುಹೆಯ ಮುಂದೆ ಹಾಕಿದ ಉರಿಯನ್ನು ಪೂರ್ತಿ ಆರಿಸಿ ಕತ್ತಲೆ ಮಾಡಿಸಿದನು.




ಈಗ ಗುಹೆಯೊಳಗೆ ಗುಮ್ಮಗತ್ತಲೆ. ಬಾಣದ ಏಟು ತಿಂದ ಸಿಂಹದಮರಿ ಸತ್ತು ಹೋದ್ದರಿಂದ ಯಾವ ಸದ್ದೂ ಕೇಳಲಿಲ್ಲ. ಗುಹೆಯ ಹಿಂದೆ ಹೋದ ಸಿಂಹದ ಮರಿಮಾತ್ರ ಎಲ್ಲೋ ಮೂಲೆಯಲ್ಲಿರುವಂತೆ ಒಮ್ಮೊಮ್ಮೆ ಆ ಕಡೆಯಿಂದ ಸಣ್ಣ ಗರ್ಜನೆ ಕೇಳುತ್ತಿತ್ತು. ಹೊರಗೆ ಓಡಿ ಹೋದ ಸಿಂಹವು, ತನ್ನ ಮರಿಗಳ ಮಮಕಾರದಿಂದ ಹಿಂದಿರುಗಿ ಬರಬಹುದೆಂಬ ಭಯವು ಸಮರಸಿಂಹನಿಗಾಯಿತು. ಹೊರಗೆಲ್ಲಿಯೂ ಜನರ ಶಬ್ದ ಕೇಳದಿದ್ದರೂ, ಕುಂಭಾಂಡನೂ ಆಟವಿಕರೂ ನಿಶ್ಶಬ್ದತೆಯಿಂದ ತಮ್ಮನ್ನು ಹುಡುಕುತ್ತಿರಬೇಕೆಂದು ಇನ್ನಷ್ಟು ಭಯವೂ ಅನುಮಾನವೂ ಅವನ ನೆಮ್ಮದಿಯನ್ನು ಕೇಡಿಸಿತು.

ಈ ಕಾರಣಗಳಿಂದ ಸಮರಸೇನನು ಮಾತ್ರವಲ್ಲ. ಸೈನಿಕರೂ ಹೆದರಿಕೊಂಡು ಜೀವವನ್ನು ಕೈಯಲ್ಲಿಟ್ಟುಕೊಂಡಿದ್ದರು. ಒತ್ತೊತ್ತಿ ಬರುವ ನಿದ್ದೆಯನ್ನು ಬಲವಂತದಿಂದ ಹಿಂದೊತ್ತಿಕೊಂಡು ಕತ್ತಲೆಯಲ್ಲಿ ಕುಳಿತಿದ್ದರು. ಹಠಾತ್ತಾಗಿ ಸಮರಸೇನನಲ್ಲಿ ಇನ್ನೊಂದು ತೀವ್ರವಾದ ಭಯದ ಒತ್ತಡವೆದ್ದಿತು. ಒಂದು ವೇಳೆ ಕುಂಭಾಂಡನಿಗೆ ತಾವಿರುವ ಗುಹೆ ಗೊತ್ತಾಯಿತೇನೋ? ಅವನು ತನ್ನ ಆಟವಿಕರ ಗುಂಪಿನೊಂದಿಗೆ ಬಂದು ಗುಹೆಯ ಬಾಯಿಯಲ್ಲಿ ಹೊಕ್ಕುಬಿಟ್ಟರೆ ಹೋರಾಡಲಿಕ್ಕೂ ಸಾಧ್ಯವಿಲ್ಲದೆ ಪ್ರಾಣಬಿಡಬೇಕಾಗಿ ಬರುತ್ತದೆ ! ಹಾಗಾಗಬಾರದು !

ಅವನು ಸೈನಿಕರನ್ನು ನೋಡಿ, "ನಾವು ಈ ಗುಹೆಯೊಳಗೆ ಕುಳಿತಿರುವುದರಿಂದ ಥಕ್ಕನೆ ಕುಂಭಾಂಡನು ಬಂದುಬಿಟ್ಟರೆ ಇಕ್ಕಟ್ಟಿನಲ್ಲಿ ಸಿಕ್ಕಿಕೊಳ್ಳುತ್ತೇವೆ. ಆದ್ದರಿಂದ ನೀವು ಆ ಮರದ ಮೇಲೇರಿ ಆಟವಿಕರು ನಮ್ಮನ್ನು ಶೋಧಿಸಿಕೊಂಡು ಈ ಪ್ರಾಂತದಲ್ಲೆಲ್ಲಿಯಾದರೂ ಇರುವರೋ ನೋಡಿರಿ. ಒಂದುವೇಳೆ ಅವರು ಈ ಕಡೆಗೆ ಬರುವ ಸುಳಿವು ಕಂಡರೆ, ಒಬ್ಬನು ಇಳಿದು ಬಂದು ನನಗೆ ಹೇಳಲಿ. ನಾವು ಇಲ್ಲಿಂದ ಬೇರೊಂದು ಕಡೆಗೆ ತಪ್ಪಿಸಿಕೊಳ್ಳೋಣ." ಎಂದನು.

ಸೈನಿಕರು ತಮ್ಮ ನಾಯಕನ ಅಪ್ಪಣೆಯಂತೆ ಗುಹೆಯಿಂದ ಹೊರಗೆ ಬಂದು ಕೊಂಬೆಗಳಿಂದಲೂ, ಎಲೆಗಳಿಂದಲೂ ತುಂಬಿದ ಮರದ ಮೇಲೇರಿ, ನಾಲ್ಕುಸುತ್ತಲೂ ಪರೀಕ್ಷಿಸಿ ನೋಡ ತೊಡಗಿದರು. ಅಲ್ಲಲ್ಲಿ ಮುದ್ದೆಮುದ್ದೆಯಾಗಿ ಚಂದ್ರ ಪ್ರಕಾಶವೂ, ಕತ್ತಲೆಯೂ ಕಾಣಿಸುತ್ತಿತ್ತೇ ಹೊರತು ಜನರ ನಡೆ ದಾಟಗಳೊಂದೂ ಅವರಿಗೆ ಕಾಣಲಿಲ್ಲ. ರಾತ್ರಿಯ ಹೊತ್ತಿನಲ್ಲಿ ಕಾಡಿನಲ್ಲಿ ಹಾಗೆ ಪರೀಕ್ಷಿಸಿ ತಿಳಿಯುವುದೂ ಕಷ್ಟವೇ.

ಗುಹೆಯೊಳಗೆ ಒಬ್ಬಂಟಿಗನಾಗಿದ್ದ ಸಮರಸೇನನಿಗೆ ಸಮೀಪದಲ್ಲೆಲ್ಲೋ ಮನುಷ್ಯರ ಮಾತುಗಳು ಕೇಳ ಬಂದುವು. ಅವು ತನ್ನ ಸೈನಿಕರ ಮಾತುಗಳಂತಿರಲಿಲ್ಲ. ಒಂದು ವೇಳೆ ಕುಂಭಾಂಡನ ಅನುಚರರು ಇಲ್ಲೆಲ್ಲೋ ಹೊಂಚಿಕೊಂಡಿರುವರೋ? ಸದ್ದಿಲ್ಲದಂತೆ ಗುಹೆಯ ದ್ವಾರದ ಹೊರಗೆ ಬಂದು ಸುತ್ತೂ ಕತ್ತು ತಿರುಗಿಸಿ ನೋಡಿದನು. ಯಾರೂ ಇರುವಂತೆ ಕಾಣಲಿಲ್ಲ. ಆ ಮಾತಿನ ಧ್ವನಿಯನ್ನು ಕಿವಿಗೊಟ್ಟು ಆಲಿಸಿದಾಗ ಅದು ಗುಹೆಯ ಒಳಗೇ ಹಿಂದಿನ ಭಾಗದಿಂದ ಬರುವಂತಿತ್ತು. ಹಾಗಾದರೆ ಗುಹೆಯೊಳಗೆಲ್ಲಿ ಯಾದರೂ ರಹಸ್ಯ ದ್ವಾರವಿರಬೇಕೆನಿಸಿತು. ಈ ಗುಡ್ಡದಲ್ಲಿರುವ ಸಿಂಹದ ಗುಹೆಯೊಳಗೆ ಮಾನವರು ಹೇಗೆ ಪ್ರವೇಶಿಸಿರಬಹುದು? ಅಥವಾ ಮನುಷ್ಯರು ತಮ್ಮ ಸೌಕರ್ಯಕ್ಕಾಗಿ ಏರ್ಪಡಿಸಿಕೊಂಡ ಗುಹೆಯಲ್ಲಿ ಸಿಂಹವು ಸೇರಿರಬಹುದೆ? ಯಾವುದಕ್ಕೂ ನೋಡೋಣವೆಂದುಕೊಂಡು ಸಮರಸೇನನು ಗುಹೆಯೊಳಗಿನ ಗೋಡೆಯನ್ನು ತಡವುತ್ತಾ ಹಿಂದಿನ ಭಾಗದವರೆಗೂ ಹೋದನು.

ಹಠಾತ್ತಾಗಿ ಅವನ ಕೈಗೆ ಚಿಕ್ಕದೊಂದು ಬೆಣೆಯಂತಹುದು ತಗಲಿತು. ಅದನ್ನು ಆಚೀಚೆ ಆಡಿಸಿ ಎಳೆದನು. ಆಗ ಕಲ್ಲಿನಲ್ಲಿ ಅಳವಡಿಸಲ್ಪಟ್ಟ ವಿಚಿತ್ರವಾದ ಕಲ್ಲಿನ ಬಾಗಿಲು ತೆರೆದುಕೊಂಡಿತು. ಅದರಿಂದ ಚಂದ್ರಪ್ರಕಾಶವು ಗುಹೆಯೊಳಗೆ ಪ್ರವೇಶಮಾಡಿತು! ಆಟವಿಕ ಜಾತಿಯವರು ಶತ್ರುಗಳಿಂದ ತಪ್ಪಿಸಿಕೊಳ್ಳಲು ಮಾಡಿಕೊಂಡ ಏರ್ಪಾಡಾಗಿರಬೇಕು ಇದು.

ಸಮರಸೇನನು ಆ ದ್ವಾರದಿಂದ ಹೊರಬಂದು ಸುತ್ತಲೂ ನೋಡಿದನು. ಕೆಲವು ಗಜಗಳ ದೂರದಲ್ಲಿ ಇಬ್ಬರು ಮನುಷ್ಯರು ತಮ್ಮೊಳಗೆ ಏನೋ ಮಾತಾಡಿಕೊಳ್ಳುತ್ತಿದ್ದರು. ದುಸ್ತುಗಳಿಂದ ಅವರು ಆಟವಿಕ ಜಾತಿಯವರಾಗಿ ಕಾಣಲಿಲ್ಲ.

ಸಮರಸೇನನು ಏನು ಮಾಡುವುದೆಂದು ಆಲೋಚಿಸುವುದರೊಳಗೆ, ಅವರು ಸಮರಸೇನನನ್ನು ನೋಡಿ, ಮಿಂಚಿನ ವೇಗದಲ್ಲಿ ಸಮರಸೇನನ ಮೇಲೆ ಹಾರಿ, ಅವನ ಕೈಗಳನ್ನು ಹಿಡಿದು ಬೆನ್ನಿನೊಂದಿಗೆ ಬಿಗಿದುಬಿಟ್ಟರು. (ಇನ್ನೂ ಇದೆ)





# ಧರ್ಮಮಾರ್ಗ

ಬಂಡೆಗೆ ಬಡೆದ ಚೆಂಡು ಹಿಂದಿರುಗಿ ಹಾರಿದಂತೆ ಮತ್ತೆ ಮರದ ಬಳಿಗೆ ಹಿಂದಿರುಗಿದ ರಾಜಾ ತ್ರಿವಿಕ್ರಮನು, ಕೊಂಬೆಯಲ್ಲಿ ನೇತಾಡುತ್ತಿದ್ದ ಶವ ವನ್ನು ಕೆಳಗಿಳಿಸಿ ತನ್ನ ಹೆಗಲಿನ ಮೇಲೆ ಹೇರಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯು ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಮಹಾ ರಾಜನೇ ! ನೀನು ಏನನ್ನು ಸಾಧಿಸಬೇಕೆಂದು ಇಷ್ಟೆಲ್ಲಾ ಶ್ರಮಪಡುತ್ತಿರುವಿಯೋ ನನಗಂತೂ ಗೊತ್ತಾಗುವುದಿಲ್ಲ. ಒಂದು ಸಂಗತಿ ಮಾತ್ರ ನೆನಪಿಟ್ಟುಕೋ. ತಾರಕವಾದ ಕಾರ್ಯಕ್ಕೆ ತಲೆ ಹಾಕಿದವನು ತಾರಕವಾದ ದಾರಿಯನ್ನೇ ಹಿಡಿಯ ಬೇಕು. ನೀನು ಕೂಡಾ ತಾರಕ ಕಾರ್ಯವನ್ನೇ ಸಾಧಿಸಲು ಹೊರಟಿರಬೇಕು. ಮಾರಕವಾದ ಕಾರ್ಯಗಳಿಗೆ ಅನೇಕ ಮಾರ್ಗಗಳಿವೆ. ಗೊತ್ತಾ ? ನೀನು ಅಂತಹ ಮಾರ್ಗವನ್ನು ಹಿಡಿದಿದ್ದರೆ, ಅದರಿಂದ ತಾರಕವಾದ ಫಲಿತ ಸಿಗಲಾರದೆಂಬು ದಕ್ಕೆ ಧರ್ಮನಂದನನೆಂಬ ಯೋಗಿಯ ಕಥೆಯೊಂದು ಉದಾಹರಣೆಯಾಗಿದೆ. ದಾರಿಯ ಶ್ರಮ ತಿಳಿಯ

## ಬೇತಾಳಕಥೆಗಳು

ದಂತೆ ಆ ಕಥೆಯನ್ನು ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಪ್ರಾರಂಭಿಸಿತು :

ಒಂದು ಕಾಲದಲ್ಲಿ ಶಿಳ್ಳಂಗೇರಿ ಎಂಬ ಊರಿನಲ್ಲಿ ಧರ್ಮನಂದನನೆಂಬ ದೊಡ್ಡ ಯೋಗಿಯೊಬ್ಬ ನಿದ್ದನು. ಅವನು ಕೆಲವು ವರ್ಷಗಳ ವರೆಗೆ ಅನೇಕ ಊರುಗಳನ್ನು ತಿರುಗಿ, ಜನರಿಂದ ಧನವನ್ನು ದಾನದ ರೂಪದಲ್ಲಿಯೂ ಕಾಣಿಕೆಯಾಗಿಯೂ ಪಡೆದುಕೊಂಡು ಅದರಿಂದ ಒಂದು ವಿದ್ಯಾ ಕೇಂದ್ರವನ್ನು ಸ್ಥಾಪನೆ ಮಾಡಿದನು. ಆ ವಿದ್ಯಾ ಕೇಂದ್ರದಲ್ಲಿ ವಿದ್ಯಾರ್ಥಿಗಳಿಗೆ ವೇದಶಾಸ್ತ್ರಗಳನ್ನು ಮಾತ್ರವಲ್ಲದೆ, ಸತ್ಪ್ರವರ್ತನೆಯ ಕ್ರಮಗಳನ್ನೂ ಕಲಿಸುತ್ತಿದ್ದರು.

ಈ ಕಾರಣದಿಂದಾಗಿ ಧರ್ಮನಂದನನು ಸ್ಥಾಪಿಸಿದ ವಿದ್ಯಾಕೇಂದ್ರವು ಬೇಗದಲ್ಲೇ ಪ್ರಸಿದ್ಧವಾಯಿತು. ಆಗಾಗ ಪ್ರಜೆಗಳಿಂದ ದಾನಧರ್ಮಗಳ ಬೇಡಿಕೆಯ ನ್ನೊಡ್ಡುವುದು ಮಾತ್ರವಲ್ಲದೆ, ಆ ದೇಶವನ್ನಾಳುವ ರಾಜನಿಂದಲೂ ಧನಸಹಾಯ ಪಡೆಯುವುದು ಒಳ್ಳೆಯದೆಂದು ಧರ್ಮನಂದನನಿಗೆ ತೋರಿತು. ಅದರಂತೆ ರಾಜನನ್ನು ನೋಡಲು ಹೋದನು.

ಅವನು ಹೇಳಿದುದನ್ನೆಲ್ಲಾ ರಾಜನು ಆಸಕ್ತಿಯಿಂದಲೇ ಕೇಳಿದನು. ಆಮೇಲೆ ಅವನು ಧರ್ಮನಂದನಯೋಗಿಯೊಂದಿಗೆ ಹೀಗೆಂದನು : "ನೀವು ಅದನ್ನು ಸ್ಥಾಪಿಸಿ ಇಷ್ಟು ವರ್ಷಗಳ ವರೆಗೂ ನನ್ನ ಸಹಾಯವೇನೂ ಇಲ್ಲದೆಯೇ ವಿದ್ಯಾಕೇಂದ್ರವನ್ನು ಜಯಪ್ರದವಾಗಿ ನಡೆಸಿಕೊಂಡು ಬರುತ್ತಿದ್ದೀರಷ್ಟೆ? ಈಗ ನನ್ನ ಧನಸಹಾಯದ ಅಗತ್ಯವೇನು ಬಂತು? ನೀವು ವಿದ್ಯಾರ್ಥಿಗಳಿಗೆ ಹಿತವಾದ, ವಿದ್ಯೆಗಳನ್ನು ಕಲಿಸುವ ಮಾತು ನಿಜ ವಾಗಿದ್ದರೆ, ಪ್ರಜೆಗಳೇ ನಿಮಗೆ ಧನಸಹಾಯವನ್ನು ಮಾಡಿಯೇ ಮಾಡುತ್ತಾರೆ."

ರಾಜನಿಗೆ ಧನಸಹಾಯ ಮಾಡಲು ಇಷ್ಟವಿಲ್ಲ ವೆಂಬುದನ್ನು ತಿಳಿದು ಧರ್ಮನಂದನನು ಮತ್ತೇನೂ ಹೇಳದೆ ಹಿಂದಿರುಗಿದನು. ತಾನು ಸ್ಥಾಪಿಸಿದ ವಿದ್ಯಾ ಕೇಂದ್ರವನ್ನು ಇನ್ನಷ್ಟು ಅಭಿವೃದ್ಧಿಗೆ ತರಬೇಕೆಂದು



ಅವನ ಮನೋಗತವಾಗಿತ್ತು. ಅದನ್ನೇ ತನ್ನ ಜೀವಿತ ಧ್ಯೇಯವನ್ನಾಗಿಟ್ಟುಕೊಂಡು ಅವನು ಎಷ್ಟು ತಿರುಗಿ ಚಂದಾ ವಸೂಲು ಮಾಡಿಕೊಂಡರೂ, ಮೊದಲಿನಂತೆ ಜನರು ಧನವನ್ನು ಕೊಡಲಿಲ್ಲ. ಮೊದಲು ಧಾರಾಳವಾಗಿದ್ದ ಪ್ರಜೆಗಳ ಕೈ ಈಗ ಗಿಡ್ಡಗಾಗಿ ಹೋಗಿತ್ತು. ಹೀಗಾದ ಮೇಲೆ ಪ್ರಜೆಗಳ ಹಿತಾಸಕ್ತಿಗೆ ತಕ್ಕಹಾಗೆ ತನ್ನಿಂದ ಮಾಡಲು ಸಾಧ್ಯವಾಗಿಲ್ಲವೆಂದುಕೊಂಡು, ಧರ್ಮನಂದನನು ವಿದ್ಯಾಕೇಂದ್ರವನ್ನು ಮುಚ್ಚಿಬಿಡಬೇಕೆಂದು ನಿರ್ಧರಿಸಿದನು. ಆ ಸಮಯದಲ್ಲಿ ಧರ್ಮನಂದನನ ಬಳಿಗೆ ಭೀಮಯ್ಯನೆಂಬ ವ್ಯಕ್ತಿ ಬಂದು, ವಿದ್ಯಾಕೇಂದ್ರವನ್ನು ಮುಚ್ಚಬಾರದೆಂದೂ, ತಾನು ಬೇಕಾದ ಹಾಗೆ ಸಹಾಯಮಾಡಬಲ್ಲೆನೆಂದೂ ವಾಗ್ದಾನ ಮಾಡಿದನು. ಭೀಮಯ್ಯನ ವಿವರಗಳನ್ನು ಕುರಿತು ಕೇಳಿದುದಕ್ಕೆ, "ಅಯ್ಯಾ, ನನ್ನ ವೃತ್ತಿ ಮತ್ತು ನನ್ನ ಸ್ವಂತ ವಿವರಗಳನ್ನು ತಿಳಿಯುವುದರಿಂದ ನಿಮಗೆ ಆಗುವ ಪ್ರಯೋಜನವೇನೂ ಇಲ್ಲ. ಕುಟುಂಬ ವೈರಾಗ್ಯದಿಂದ ನನ್ನದು ರಹಸ್ಯಧರ್ಮವೆಂದು ತಿಳಿಯಿರಿ. ಹೇಳಿದ ಪ್ರಕಾರ ತಮಗೆ ಪ್ರತಿ ತಿಂಗಳೂ ಹಣದ ಒಂದು ಮೊತ್ತವನ್ನು ಕಳುಹಿಸುತ್ತಾ ಇರುತ್ತೇನೆ" ಎಂದನು ಭೀಮಯ್ಯ.

ಇವನ ಧರ್ಮಕಾರ್ಯವು ಕುಟುಂಬದಲ್ಲಿ ಯಾರಿಗೋ ಇಷ್ಟವಿಲ್ಲದಿರಬಹುದು ಎಂದುಕೊಂಡು ಧರ್ಮನಂದನನು, ತಿಂಗ ತಿಂಗಳೂ ಭೀಮಯ್ಯನಿಂದ ಬರುವ ಹಣವನ್ನು ಸ್ವೀಕರಿಸಿಕೊಂಡಿದ್ದನು. ಬೇರೆಯವರ ಹತ್ತಿರ ವಿಚಾರಿಸಿದಾಗ, ಭೀಮಯ್ಯನು ಆ ಪ್ರಾಂತದಲ್ಲಿ ಅನೇಕ ವರ್ಷಗಳಿಂದ ಧರ್ಮದಾತನೆಂದು ಹೆಸರು ಪಡೆದವನೆಂದೂ ಸ್ವಲ್ಪ ಗೊತ್ತಾಯಿತು. ಧರ್ಮನಂದನನ ವಿದ್ಯಾಕೇಂದ್ರವು ಅಭಿವೃದ್ಧಿಗೆ ಬರುತ್ತಾ ಇದ್ದಿತು.

ಹೀಗಿರುವಾಗ ಒಂದಾನೊಂದು ದಿನ ಧರ್ಮನಂದನನು ಭೀಮಯ್ಯನನ್ನು ಕುರಿತು ಆಶ್ಚರ್ಯಕರವಾದ ಸಂಗತಿಯನ್ನು ಕೇಳಿದನು. ತನಗೆ ಧನ ಸಹಾಯ ಮಾಡುವ ಆ ಭೀಮಯ್ಯ ದಾರಿದೋಚುವ



ಕಳ್ಳರ ಗುಂಪಿನ ನಾಯಕನಂತೆ! ಬಹಿರಂಗವಾಗಿ ದಾನಧರ್ಮಗಳನ್ನು ಮಾಡುವ ಭೀಮಯ್ಯನು ಸಂಪಾದಿಸುವ ಹಣ ಕೊಳ್ಳೆಹೊಡೆದು ಸಂಗ್ರಹಿಸಿದ್ದು!. ಅವನ ಹೆಸರು ರಾಜನಿಗೆ ಗೊತ್ತಾಗಿ ಹೋಗಿದೆ. ಅವನನ್ನು ಹಿಡಿದುಕೊಟ್ಟವರಿಗೆ ರಾಜನು ದೊಡ್ಡ ಬಹುಮಾನವನ್ನೂ ಪ್ರಕಟಿಸಿದ್ದನು.

ಇಷ್ಟು ತಿಳಿದ ಮೇಲೆ ಧರ್ಮನಂದನನು, ರಹಸ್ಯವಾಗಿ ರಾಜನಿಗೆ ಸಮಾಚಾರ ಕಳುಹಿಸಿ ತನಗೆ ಧನವನ್ನು ತಂದುಕೊಡುವ ಆಳಿನ ಮೂಲಕವಾಗಿ, ರಾಜಭಟರು ಭೀಮಯ್ಯನನ್ನು ಹಿಡಿದುಕೊಳ್ಳುವಂತೆ ಮಾಡಿದನು. ಭೀಮಯ್ಯನಿಗೆ ಕಾರಾಗೃಹ ಪ್ರಾಪ್ತಿಯಾಯಿತು. ಧರ್ಮನಂದನನು ತನಗೆ ಮಾಡಿದ ಸಹಾಯಕ್ಕಾಗಿ ರಾಜನು ತುಂಬಾ ಸಂತೋಷಪಟ್ಟು, ಅವನ ವಿದ್ಯಾಕೇಂದ್ರಕ್ಕೆ ಎಂದಿಗೂ ಆರ್ಥಿಕ ಕೊರತೆ ಬಾರದಂತೆ ಮಾಡಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಆ ಧರ್ಮನಂದನನ ಪ್ರವರ್ತನೆ ತಾರಕವಾದುದೇನಾ? ತನ್ನ ಜೀವಿತದ ಧ್ಯೇಯವೆಂದು ನಡೆಸುವ ವಿದ್ಯಾಕೇಂದ್ರವನ್ನು ಮುಚ್ಚಬೇಕಾಗಿ ಬಂದ ದಶೆಯಲ್ಲಿ ಧನಸಹಾಯ ಮಾಡಿದವನಿಗೆ ದೊಡ್ಡ ದ್ರೋಹ ಮಾಡಿದ್ದು ಸರಿಯೆ? ಕಳ್ಳನೊಬ್ಬನು ತಾನು ಕದ್ದ ಧನವನ್ನು ಒಳ್ಳೆಯ ಕಾರ್ಯಕ್ಕೆ ಉಪಯೋಗಿಸುವಂತೆ ಮಾಡುವುದರಲ್ಲಿ ತಪ್ಪೇನಿದೆ? ಅಷ್ಟೇ ಅಲ್ಲದೆ ಯಾವ ರಾಜನು ತನಗೆ ಧನಸಹಾಯ ಮಾಡಲು ನಿರಾಕರಿಸಿದನೋ, ಆ ರಾಜನಿಗೇ ತನಗೆ ಮೇಲು ಮಾಡಿದವನನ್ನು ಹಿಡಿಸಿಕೊಡುವುದು ನ್ಯಾಯವೇ? ಇದಕ್ಕೆಲ್ಲ ತಕ್ಕ ಸಮಾಧಾನ ತಿಳಿದು ಕೂಡಾ ಹೇಳದಿದ್ದರೆ ತಲೆಯೊಡೆದು ಸಾಯುವಿ!" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಧರ್ಮನಂದನನ ವಿದ್ಯಾಕೇಂದ್ರವು ವಿದ್ಯಾರ್ಥಿಗಳಿಗೆ ವೇದಶಾಸ್ತ್ರ ಪುರಾಣಗಳೊಂದಿಗೆ, ಸನ್ಮಾರ್ಗ ಪ್ರವರ್ತನೆಯನ್ನೂ, ನೀತಿನಿಯಮಗಳನ್ನೂ ಬೋಧಿಸುವಂಥಾದ್ದು. ಆದುದರಿಂದ ಧರ್ಮನಂದನನು ಆ ಧ್ಯೇಯವನ್ನು ಸಾಧಿಸಲು, ಅದಕ್ಕೆ ವಿರುದ್ಧವಾದ ಸಾಧನೆಗಳನ್ನು ಅಂಗೀಕರಿಸಿದರೆ ಅದು ತಪ್ಪೆನಿಸುತ್ತದೆ. ಕಳ್ಳನೆಂದು ಗೊತ್ತಾದ ಮೇಲೆ ಹಿಡಿಸಿಕೊಡದಿದ್ದರೆ, ಬೋಧಿಸುವುದೊಂದು, ಮಾಡುವುದು ಇನ್ನೊಂದು ಎಂಬ ಹಾಗಾಗುತ್ತದೆ. ಆದುದರಿಂದ ಅವನ ಪ್ರವರ್ತನೆಯಲ್ಲಿ ಯಾವ ಅನ್ಯಾಯವೂ ಇಲ್ಲ. ತಪ್ಪೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ, ಎಂದಿನಂತೆ ಮರದಕೊಂಬೆಯಲ್ಲಿ ನೇತಾಡಿತು.





# ಎರಡು ಪಿಶಾಚಿಗಳು

ಒಂದು ಊರಿನಲ್ಲಿ ಶೇಷಾದ್ರಿ ಎಂಬ ಯುವಕನಿಗೆ ಇಪ್ಪತ್ತು ವರ್ಷ ಪ್ರಾಯವಾದರೂ, ಯಾವ ಬಾಧ್ಯತೆಯೂ ಬಂದಿರಲಿಲ್ಲ. ಅವನಿಗೆ ಯಾವ ಹೊಣೆಯೂ ಬೇಡವಾಗಿತ್ತು. ಯಾವ ಕೆಲಸ ಮಾಡಲೂ ಇಷ್ಟವಿಲ್ಲದೆ ಯಾವ ಗುಡಿಗುಂಡಾರಗಳ ಜಗಲಿಯಲ್ಲಿಯೋ ಕುಳಿತುಕೊಂಡು ಯಾಚನೆಯ ಭಾವದಿಂದ ಬರುಹೋಗುವವರನ್ನು ನೋಡುವನು. ಯಾರಾದರೂ ಕೆಲವರು ಚಿಲ್ಲರೆಕಾಸು ಅವನಿಗೆ ಕೊಡುವವರು. ಆದರಿಂದಲೇ ಹೊಟ್ಟೆಯ ಹಸಿವೆ ತೀರಿಸಿಕೊಳ್ಳುತ್ತಾನೆ. ಹಣವೇನೋ ತುಂಬಾ ಬೇಕೆಂಬ ಆಶೆ ಅವನಿಗಿತ್ತು. ಆದನ್ನು ಸಂಪಾದಿಸಲು ಕೆಲಸಮಾಡಲು ಮಾತ್ರ ಅವನಿಗೆ ಮನಸ್ಸಿಲ್ಲ.

ಒಂದುದಿನ ರಾತ್ರಿ ಅವನು ಊರ ಹೊರಗಿನ, ಕೆರೆಯ ದಂಡೆಯಲ್ಲಿದ್ದ ಮರದ ಕೆಳಗೆ ಮಲಗಿ ಕೊಂಡಿದ್ದನು. ಒಳ್ಳೆಯ ನಿದ್ದೆಯಲ್ಲಿದ್ದ ಅವನಿಗೆ ಏನೋ ದೊಡ್ಡ ಸಪ್ಪಳ ಕೇಳಿ ಎಚ್ಚರವಾಯಿತು.

ಕೆರೆಯ ದಂಡೆಯ ಮೇಲೆ ಎರಡು ಪಿಶಾಚಿಗಳು ಗಟ್ಟಿಯಾಗಿ ಮಾತಾಡಿಕೊಳ್ಳುತ್ತಿದ್ದುವು. ಮಾತುಗಳು ತಗಾದೆಯಾಗಿ ಒಂದರೊಡನೊಂದು ಜಗಳಮಾಡಿಕೊಳ್ಳುತ್ತಿದ್ದುವು. ಒಂದು ಪಿಶಾಚಿ ಬೆಳ್ಳಗಿದ್ದರೆ ಇನ್ನೊಂದು ಪಿಶಾಚಿ ಕರ್ರಗಿದ್ದಿತು. ಶೇಷಾಚಲನಿಗೆ ಅವು ಪಿಶಾಚಿಗಳೆಂದು ಗೊತ್ತಾದರೂ ಯಾವುದೋ ಕತೆಯಲ್ಲಿ ಅವು ಮನುಷ್ಯರಿಗೇನೂ ಮಾಡುವುದಿಲ್ಲವೆಂದು ಕೇಳಿದ್ದನು. ಅಂತಲೇ ಅವನು ಎದ್ದು ಕುಳಿತು, "ನಡುರಾತ್ರಿ ಹೊತ್ತಿನಲ್ಲಿ ಏನಿದು ನಿಮ್ಮ ಗಲಾಟೆ ? ಯಾಕೆ ಹೀಗೆ ಹೊಡೆದಾಡಿಕೊಳ್ಳುವಿರಿ ? ಯಾವ ಸುಡುಗಾಡಿಗಾದರೂ ಹೋಗಿ ಸತ್ತುಕೊಳ್ಳಿ !" ಎಂದು ಕೋಪದಿಂದ ಕೂಗಿ ಹೇಳಿದನು.

ಪಿಶಾಚಿಗಳೆರಡೂ ಜಗಳಬಿಟ್ಟು ಅವನ ಬಳಿಗೆ ಓಡಿಬಂದು, "ನಮ್ಮ ಜಗಳ ಹೇಗೆ ತೀರುವುದೋ ನಮಗೆ ಗೊತ್ತಾಗೋದಿಲ್ಲ. ನೀನೇ ತೀರಿಸಬೇಕು" ಎಂದು ಅವನ ಹತ್ತಿರ ಮೊಣಕಾಲೂರಿದುವು.

"ಹೌದೌದು ! ನನಗೆ ಬೇರೆ ಕೆಲಸವೇನೂ ಇಲ್ಲವೆಂದುಕೊಂಡಿರಾ ? ಹೋಗಿ ಹೋಗಿ !" ಎಂದನು ಶೇಷಾದ್ರಿ ತಿರಸ್ಕಾರದಿಂದ.

"ಅಯ್ಯೋ ! ಹಾಗೆ ಹೇಳಬೇಡಯ್ಯ ! ನೀನು ಹೇಳಿದ್ದನ್ನು ಸರಿಯಾದ ತೀರ್ಪು ಅಂತ ಒಪ್ಪಿಕೊಳ್ತೇವೆ. ನಮ್ಮಿಬ್ಬರಲ್ಲಿ ಅಂದವಾಗಿರುವವರು

ಎಂ. ಕೆ. ಈಶ್ವರರಾವ್



ಯಾರು ಎಂದು ನಮಗೆ ಗೊತ್ತಾಗಿಲ್ಲ. ದಯಮಾಡಿ ನೀನೇ ಹೇಳಿ ನಮ್ಮ ಜಗಳ ತೀರಿಸು" ಎಂದು ಪಿಶಾಚಿಗಳು ಬೇಡಿಕೊಂಡುವು.

"ನನ್ನನ್ನು ನೋಡು, ಬೆಳ್ಳಗಾಗಿ ಅಂದವಾಗಿರುವವನು ನಾನು ತಾನೆ? ಇವನು ಕರೀಮಸಿಯ ಹಾಗೆ ಕುರೂಪಿಯಾಗಿದ್ದಾನೆ. ಹೌದಷ್ಟೆ?" ಎಂದಿತು ಬಿಳೀ ಪಿಶಾಚಿ.

"ಕಪ್ಪಗೆ ನಿಗಿನಿಗಿ ಹೊಳೆಯುವವನು ನಾನೇ. ನನ್ನ ಚೆಂದ ಕೆಡುವಂಥಾದ್ದಲ್ಲ. ಇವನು ಬೊಂಬೆ ಹಾಗಿದ್ದಾನೆ" ಎಂದಿತು ಕರೀ ಪಿಶಾಚಿ.

"ನಾನು ನಿಮ್ಮಿಬ್ಬರನ್ನೂ ಈಗತಾನೇ ನೋಡುತ್ತಿದ್ದೇನೆ, ಫಕ್ಕನೆ ಅಭಿಪ್ರಾಯ ಹೇಗೆ ಹೇಳಲಿ? ಆಮೇಲೆ ಬನ್ನಿ" ಎಂದನು ಶೇಷಾದ್ರಿ.

"ಇನ್ನು ನಾವು ಮುಂದಿನ ಅಮಾವಾಸ್ಯೆಗಷ್ಟೇ, ಈ ಮರದ ಹತ್ತಿರವೇ ಬರುತ್ತೇವೆ." ಎಂದುವು ಪಿಶಾಚಿಗಳು.

"ನಿಲ್ಲಿರಿ. ಅಷ್ಟು ಹೊತ್ತಿಗೆ ನಾನು ಕೂಡಾ ಸತ್ತು ನಿಮ್ಮ ಹಾಗೇ ಆದೇನು. ಯಾವ ಕೆಲಸವೂ ಇಲ್ಲದೆ, ಹಣವೂ ಇಲ್ಲದೆ ನಾನು ಹೇಗೆ ಬದುಕಿಕೊಂಡಿದ್ದೇನು? ನನ್ನನ್ನು ನಂಬಬೇಡಿ" ಎಂದನು ಶೇಷಾದ್ರಿ ಬುದ್ಧಿ ತಂದುಕೊಂಡು.

ಪಿಶಾಚಿಗಳು ತಮ್ಮೊಳಗೆ ತಾವು ಮಾತಾಡಿಕೊಂಡು, ಒಂದೊಂದು ಪಿಶಾಚಿ ಒಂದೊಂದು ಚೀಲ ಹಣವನ್ನು ತಂದು ಶೇಷಾದ್ರಿಯ ಕೈಗೆ ಕೊಟ್ಟು ಮಾಯವಾದುವು.

ಶೇಷಾದ್ರಿ ಆ ಹಣವನ್ನು ಲೆಕ್ಕಮಾಡಿ ನೋಡಿ ಅತ್ಯಾನಂದಗೊಂಡನು. ಅವನು ತನಗೆ ಒಳ್ಳೊಳ್ಳೆಯ ಬಟ್ಟೆಗಳನ್ನು ಹೊಲಿಸಿಕೊಂಡನು. ಬಾಡಿಗೆಗೆ ಒಂದು ಮನೆಯನ್ನು ಹಿಡಿದನು. ಅಡುಗೂಲಮ್ಮನ ಮನೆಯಲ್ಲಿ ಊಟಕ್ಕೂ ಏರ್ಪಾಡು ಮಾಡಿಕೊಂಡನು.

ಮತ್ತೆ ಅಮಾವಾಸ್ಯೆ ಬಂದ ಕೂಡಲೇ ಶೇಷಾದ್ರಿ ಮಧ್ಯರಾತ್ರಿಯ ಹೊತ್ತಿಗೆ ಆ ಕೆರೆಯ ದಂಡೆಯ ಮರದ ಹತ್ತಿರ ಹೋದನು. "ಬಂದೆಯಾ? ನಮ್ಮನ್ನು ಕುರಿತು ನಿನ್ನ ಅಭಿಪ್ರಾಯವೇನೆಂದು ಬೇಗನೇ ಹೇಳಿಬಿಡು" ಎಂದುವು ಕರೀ ಬಿಳೀ ಬಣ್ಣದ ಆ ಪಿಶಾಚಿಗಳು.

"ಹೀಗೆ ಅವಸರಮಾಡಿದರೆ ಆಯಿತೆ? ನಾನು ನಿಮ್ಮನ್ನು ನೋಡುವುದು ಇದು ಎರಡನೇ ಸಾರಿ ಹೌದಷ್ಟೆ? ಮುಟ್ಟಿದ್ದು ಮೂರು ಸಾರಿ ಅಂತ ಒಂದು ಸಾಮತಿಯಿದೆ" ಎಂದನು ಶೇಷಾದ್ರಿ.

"ಹಾಗಾದರೆ ಮುಂದಿನ ಅಮಾವಾಸ್ಯೆಯ ದಿನ ಮತ್ತೆ ಬರುತ್ತೇವೆ" ಎಂದುವು ಪಿಶಾಚಿಗಳು.

"ಅಷ್ಟು ಹೊತ್ತಿಗೆ ನಾನು ಈ ಊರನ್ನೇ ಬಿಡಬೇಕಾಗಿ ಬಂದೀತು. ಬಾಡಿಗೆ ಮನೆಯ ತೊಂದರೆಗಳು ನಿಮಗೇನು ಗೊತ್ತಿದೆ? ಯಜಮಾನ ಮನೆ ಖಾಲೀ ಮಾಡಿ ಹೊರಟುಹೋಗಲು ಹೇಳುತ್ತಿದ್ದಾನೆ. ಸ್ವಂತ ಮನೆ ಅಂತ ಒಂದು



ಇಲ್ಲದಿದ್ದರೆ ಬದುಕಲು ಸಾಧ್ಯವೇ ಇಲ್ಲದಂತಾಗಿದ್ದೇನೆ" ಎಂದನು ಶೇಷಾದ್ರಿ.

ಪಿಶಾಚಿಗಳು ತಮ್ಮೊಳಗೆ ತಾವು ಮಾತಾಡಿ ಕೊಂಡು, ಆ ಕೆರೆಯ ಬದಿಯಲ್ಲಿದ್ದ ಒಂದು ಪ್ರಶಸ್ತ ಜಾಗದಲ್ಲಿ ಒಂದು ಮನೆಯನ್ನು ಸೃಷ್ಟಿಸಿಕೊಟ್ಟುವು.

ಶೇಷಾದ್ರಿ ಮುಖದಲ್ಲಿ ಅಸಂತೃಪ್ತಿಯನ್ನು ವ್ಯಕ್ತಪಡಿಸುತ್ತ, "ಮನೆಯೇನೋ ಮಾಡಿಕೊಟ್ಟಿರಿ. ಚೆನ್ನಾಗೇ ಇದೆ. ಮನೆಯೊಳಗೆ ದಿನ ಕಳೆಯಲು ಹಣ ಬೇಡವೇನು ? ಬೇಕಾದ ಎಲ್ಲಾ ಪದಾರ್ಥಗಳ ಬೆಲೆಯೂ ಆಕಾಶಕ್ಕೇ ಮುಟ್ಟಿದೆ !" ಎಂದು ಹೇಳಲು, ಪಿಶಾಚಿಗಳು ಮತ್ತೆರಡು ಹಣದ ಚೀಲವನ್ನು ತಂದು ಅವನಿಗೆ ಕೊಟ್ಟುವು.

ಶೇಷಾದ್ರಿ ಆಗಿಂದಾಗಲೇ ಆ ಹೊಸ ಮನೆಯಲ್ಲಿ ಸೇರಿದನು. ಆ ಮನೆಗೂ ಅಡುಗೂಲಮ್ಮನ ಮನೆಗೂ ಬಹಳ ದೂರವಿತ್ತು. ಹೆಂಡತೀ ಅಂತ ಒಬ್ಬಳು ಇದ್ದರೆ ಹಾಯಾಗಿ ಅಟ್ಟು ಬಡಿಸುತ್ತಾಳೆ.

ಅಂತಲೇ ಶೇಷಾದ್ರಿ ಮರುದಿನದಿಂದ ವಧುವಿನ ಬೇಟೆಗೆ ಪ್ರಾರಂಭ ಮಾಡಿದನು. ಅಲಮೇಲು ಎಂಬ ಹುಡುಗಿ ಅವನಿಗೆ ಚೆನ್ನಾಗಿ ಹಿಡಿಸಿದ್ದಳು. ಹಿಂದೊಮ್ಮೆ ಗುಡಿಯ ಹತ್ತಿರ ಅವನು ಭಿಕ್ಷೆ ಕೇಳಿದಾಗ ಅಲಮೇಲು "ನಿನ್ನಂಥ ಸೋಮಾರಿ ಗಳಿಗೆಲ್ಲ ಭಿಕ್ಷೆ ಹಾಕುವುದಿಲ್ಲ, ಹೋಗು !" ಎಂದು ಅವನನ್ನು ನಿಂದಿಸಿ ಕಳುಹಿಸಿದ್ದಳು. ಅವನ ಪಕ್ಕದಲ್ಲಿ ಕುಳಿತಿದ್ದ ಕುರುಡಿ ಮುದುಕಿಗೆ ಭಿಕ್ಷೆಹಾಕಿ ಹೊರಟು ಹೋಗಿದ್ದಳು ಅಲಮೇಲು.

ಈಗ ಶೇಷಾದ್ರಿಯ ವೇಷ ಬದಲಾಗಿದ್ದುದರಿಂದ ಅಲಮೇಲು ಅವನನ್ನು ಗುರುತಿಸಲಿಲ್ಲ. ಅವಳ ಅಪ್ಪ ಶೇಷಾದ್ರಿಯ ಮನೆಯನ್ನೂ, ಅವನ ಹತ್ತಿರವಿರುವ ಹಣವನ್ನೂ ನೋಡಿ ಅವಳನ್ನು ಅವನಿಗೆ ಕೊಟ್ಟು ಮದುವೆ ಮಾಡಿದನು. ಮಡದಿ, ಮದುವೆ, ಔತಣ ವಿನೋದಗಳ ಸಂಭ್ರಮದಲ್ಲಿದ್ದ ಶೇಷಾದ್ರಿಗೆ ಮತ್ತೆ ಅಮಾವಾಸ್ಯೆ ಬಂದುದರ ನೆನಪೇ ಇರಲಿಲ್ಲ. ಅಮಾವಾಸ್ಯೆಯ ದಿನ ಮಧ್ಯ ರಾತ್ರಿಯಲ್ಲಿ ಧಡಧಡನೆ ಬಾಗಿಲು ಬಡೆದ ಸದ್ದು ಕೇಳಿ ಶೇಷಾದ್ರಿ ಬಂದು ಬಾಗಿಲು ತೆರೆದನು. ಇದಿರಿನಲ್ಲಿ ನಿಂತಿದ್ದ ಪಿಶಾಚಿಗಳನ್ನು ನೋಡಿ ನೆನಪಾಗಿ ಬೆಚ್ಚಿಬಿದ್ದನು.

ಹೆಂಡತಿ ಈ ಪಿಶಾಚಿಗಳನ್ನು ನೋಡಿ ಎಲ್ಲಿ ಹೆದರುವಳೋ ಎಂದು ಹೆದರುತ್ತ ಶೇಷಾದ್ರಿ ಸಿಟ್ಟಿನಿಂದ, "ನಮಗೆ ಬುದ್ಧಿಯಿಲ್ಲವೇನು? ಒಂದೇಸಾರಿ ಮನೆಗೇ ಬರಬಹುದೇ ? ನಡೆಯಿರಿ, ನಡೆಯಿರಿ" ಎನ್ನುತ್ತ ಆ ಪಿಶಾಚಿಗಳನ್ನು ಮನೆಗೆ ದೂರವಾಗಿ ಕರೆದುಕೊಂಡು ಹೋದನು.

"ಆಲೋಚನೆ ಮಾಡಿ ಆಯಿತಪ್ಪೆ ? ತೀರ್ಪು ಹೇಳು. ಬೆಳ್ಳಗಿರುವ ನಾನು ತಾನೇ ಚೆಂದ ?" ಎಂದು ಕೇಳಿತು ಬಿಳೀಪಿಶಾಚಿ.

"ನಾನು ಕರ್‍ರಗೆ ಚಿತ್ರಕಲೆಯ ಹಾಗೆ ಚೆಂದಾಗಿದ್ದೇನೆ ಹೌದಪ್ಪೆ ?" ಎಂದು ಕೇಳಿತು ಕಪ್ಪು ಪಿಶಾಚಿ.

ಶೇಷಾದ್ರಿ ಗಟ್ಟಿಯಾಗಿ ಗಂಟಲು ಕೆನೆದು "ನಿಮ್ಮ ಮುಖ! ಕಪ್ಪಿನಲ್ಲಿಯೂ ಬಿಳಿಯಲ್ಲಿಯೂ ಏನೂ ವಿಶೇಷವಿಲ್ಲ. ಎಲ್ಲವೂ ಹಣದಲ್ಲೇ ಇದೆ. ಅನೋದು ಧಂಡಿಯಾಗಿದ್ದು ಬಿಟ್ಟರೆ ಎಲ್ಲಾ ಕೊರತೆಗಳೂ ಮಟುಮಾಯವಾಗುತ್ತವೆ. ಅದು ಇಲ್ಲದವರ ಹತ್ತಿರ ಏನೇನೋ ಕೊರತೆಗಳು ಕಾಣುತ್ತವೆ. ನನ್ನ ಹತ್ತಿರ ಹಣವಿಲ್ಲದಿದ್ದಾಗ ನನ್ನನ್ನು ಕಸಕ್ಕೆ ಸಮ ಅಂದುಕೊಂಡವಳೇ, ನನ್ನಲ್ಲಿ ಹಣ ಸೇರಿದ ಕೂಡಲೇ ಸಂತೋಷದಿಂದ ಮದುವೆ ಮಾಡಿಕೊಂಡಿದ್ದಾಳೆ. ಆದ್ದರಿಂದ ಅಂದಚೆಂದ ಮಾನಮರ್ಯಾದೆ ಮೊದಲಾದ್ದೆಲ್ಲವೂ ಹಣವಿದ್ದಲ್ಲೇ ಇರುತ್ತವೆ. ಅದು ಸರಿ. ಹೊಸತಾಗಿ ಮದುವೆ ಮಾಡಿಕೊಂಡ ನನಗೆ ತುಂಬಾ ಹಣಬೇಕಾಗಿದೆ. ನೀವು ಕೊಟ್ಟದ್ದು ಏನೇನೂ ಸಾಲದು" ಎಂದನು.

ಪಿಶಾಚಿಗಳು ಅವನ ಮಾತನ್ನೆಲ್ಲ ಕೇಳಿ, "ಓಹೋ! ನಿಜ ಹೇಳಿದ್ದರಿಂದ ನಮಗೂ ಗೊತ್ತಾಯಿತು. ನಮ್ಮ ಹತ್ತಿರವಿದ್ದ ತುಂಬಾ ಹಣ ನಿನಗೇ ಕೊಟ್ಟು ಬಿಟ್ಟೆವು. ಅದನ್ನೆಲ್ಲಾ ವಾಪಸು ತೆಗೆದುಕೊಂಡು ನಮ್ಮ ನಮ್ಮ ಹಣ ಎಷ್ಟೊಂತ ನೋಡಿಕೊಂಡರೆ ನಮ್ಮ ಚೆಂದ ನಮಗೇ ಗೊತ್ತಾಗುತ್ತದೆ!" ಎಂದು ಹೇಳಿ ಪಿಶಾಚಿಗಳೆರಡೂ ಮಾಯವಾದುವು.

ಮರುಕ್ಷಣದಲ್ಲಿ ಶೇಷಾದ್ರಿಯ ಮನೆಯೂ ಮನೆಯೊಳಗಿದ್ದ ವಸ್ತು, ಒಡವೆಗಳೂ ಮಾಯವಾಗಿ ಹೋದುವು. ತಾನು ಬಟ್ಟಬಯಲಲ್ಲಿ ಬೋಳು ಮೈಯಲ್ಲಿರುವುದನ್ನು ನೋಡಿ ಅಲುಮೇಲು ಓಡುತ್ತಾ ಅವನ ಬಳಿಗೆ ಬಂದು, "ಏನಾಯಿತ್ರೀ! ಏನಿದೆಲ್ಲಾ!" ಎಂದು ಕೂಗಿದಳು. ಶೇಷಾದ್ರಿಯೂ ಮೊದಲಿನ ಬಿಕ್ಷುಕ ರೂಪದಲ್ಲಿದ್ದ!

ಇಷ್ಟುದಿನ ಹೇಗೋ ಬದುಕಿದ ತಾನು, ಇನ್ನು ಹೆಂಡತಿಯನ್ನು ಪೋಷಿಸಲಿಕ್ಕಾದರೂ ಕಷ್ಟಪಟ್ಟು ಕೆಲಸಮಾಡಬೇಕೆಂದು ನಿಶ್ಚಯಿಸಿಕೊಂಡು ಶೇಷಾದ್ರಿ ನಡೆದ ಸಂಗತಿಯನ್ನು ಅವಳಿಗೆ ಹೇಳಿ "ಕ್ಷಮಿಸು" ಎಂದು ಕೇಳಿಕೊಂಡನು.

"ಕಷ್ಟಪಡದೆ ಸಂಪಾದಿಸಿದ ಹಣ ತರಗೆಲೆಯ ಹಾಗೆ ಹಾರಿಹೋಗುತ್ತದೆ. ಆದಿನ ಗುಡಿಯ ಹತ್ತಿರ ನಾನು ತಿರಸ್ಕರಿಸಿದ್ದು ನಿಮ್ಮನ್ನಲ್ಲ, ನಿಮ್ಮಲ್ಲಿದ್ದ ಸೋಮಾರಿತನವನ್ನು. ಈಗಾದರೂ ನೀವು ದುಡಿಯುವವರಾದರೆ ನಿಮ್ಮನ್ನು ಗೌರವಿಸಲು ನಾನು ಹಿಂಜರಿಯುವೆನೆಂದುಕೊಳ್ಳಬೇಡಿ" ಎಂದಳು ಅಲಮೇಲು.

ಅವಳೂ ಅವನೊಂದಿಗೆ ದುಡಿಯುತ್ತ, ಇಬ್ಬರೂ ಸೇರಿ ಮೊದಲು ತೋಟಗಾರಿಕೆಯನ್ನು ಪ್ರಾರಂಭಿಸಿ, ಮುಂದೆ ಅಭಿವೃದ್ಧಿಗೆ ಬಂದರು.



# ಸ್ಥಿತಪ್ರಜ್ಞ

ಒಬ್ಬ ಮಹರ್ಷಿಗೆ ಮರಣಕಾಲವು ಬಂದಿತ್ತು.

ಆತನ ಕೊನೆಯ ಸಂದೇಶವನ್ನು ತಿಳಿಯಲು ಶಿಷ್ಯರೆಲ್ಲಾ ಸುತ್ತಲೂ ಕೂಡಿ ಕಿವಿಗಳನ್ನು ಹರಿತ ಮಾಡಿಕೊಂಡು ನಿಃಶಬ್ದವಾಗಿ ನಿಂತಿದ್ದರು.

ಮಹರ್ಷಿಗೆ ಊರ್ಧ್ವಶ್ವಾಸ ಎಳೆಯತೊಡಗಿತು.

"ಹೇಗಿದೆ ಸ್ವಾಮಿ ?" ಎಂದು ಒಬ್ಬ ಶಿಷ್ಯನು ಕೇಳಿದ.

"ತುಂಬಾ ಭಾರವಾಗಿದೆಯಪ್ಪಾ" ಎಂದನು ಮಹರ್ಷಿ.

ಶಿಷ್ಯರಿಗೆ ಆಶ್ಚರ್ಯವಾಯಿತು. ಅವನು ಕಷ್ಟಗಳನ್ನೂ ಸುಖಗಳನ್ನೂ ಸರಿಸಮನಾಗಿ ನೋಡುವ ವಿಷಯ ಎಲ್ಲರಿಗೂ ಗೊತ್ತಿತ್ತು.

"ಏಕೆ ಸ್ವಾಮಿ ?" ಎಂದು ಇನ್ನೊಬ್ಬ ಶಿಷ್ಯ ಕೇಳಿದ.

"ಹುಚ್ಚಾ ! ನಾಲ್ಕು ಮಂದಿ ಹೊರಬೇಕಾದ ಶರೀರವನ್ನು ಇನ್ನೂ ನಾನೊಬ್ಬನೇ ಹೊತ್ತಿದ್ದೇನೆ. ಭಾರ ಅಲ್ಲವೇ ?" ಎಂದು ನಗುತ್ತಾ ಮಹರ್ಷಿ ಕಣ್ಣು ಮುಚ್ಚಿದನು.

ನಿಜಕ್ಕೂ ಋಷಿಯ ಬಾಯಿಯಿಂದ ಹೊರಟ ಮಾತು ತುಂಬಾ ಬೆಲೆಯುಳ್ಳ ಮಾತೆಂದು ಎಲ್ಲರೂ ತೃಪ್ತಿಯಿಂದ ತಲೆದೂಗಿದರು.





# ಕಾಟ ತೀರಿತು

ಒಂದು ಊರಿನಲ್ಲಿ ಧರ್ಮರಾಜನೆಂಬವನಿಗೆ ಚಿಕ್ಕಂದಿನಲ್ಲಿಯೇ ಕಷ್ಟಕಾಲ ಬಂತು. ಒಂದು ಅಂಟು ಜಾಡ್ಯದಿಂದ ಅವನ ತಾಯಿಯೂ ತಂದೆಯೂ ತೀರಿ ಹೋಗಿ ಅನಾಥನಾದನು. ಕಡೆಗೆ ಅವನ ಸೋದರ ಮಾವ ವೆಂಕಯ್ಯನೇ ಅವನನ್ನು ಬೆಳೆಯಿಸಿ, ದೊಡ್ಡವನಾಗಿ ಮಾಡುತ್ತ, ಒಳ್ಳೆಯ ವಿದ್ಯೆ ಕಲಿತು ತೇರ್ಗಡೆಯಾಗುವಂತೆಯೂ ನೋಡಿಕೊಂಡನು. ತನಗೆ ತಿಳಿದ ದೊಡ್ಡ ಮನುಷ್ಯರ ಮೂಲಕವಾಗಿ, ರಾಜಧಾನಿಯಲ್ಲಿ ಅವನಿಗೊಂದು ಒಳ್ಳೆಯ ಉದ್ಯೋಗ ಸಿಗುವಂತೆಯೂ ಮಾಡಿದನು. ಆಮೇಲೆ ಸುಂದರಿಯಾದ ಹುಡುಗಿಯೊಂದಿಗೆ ಅವನಿಗೆ ಮದುವೆ ಮಾಡಿ ತನ್ನ ಬಾಧ್ಯತೆ ನೆರವೇರಿಸಿಕೊಂಡನು ಮಾವ.

ಧರ್ಮರಾಜನ ಸಂಸಾರವು ಮೊದಮೊದಲು ಚೆನ್ನಾಗಿಯೇ ಸಾಗಿತು. ಆಮೇಲೆ ಗಂಡ ಹೆಂಡಿರ ನಡುವೆ ಕರಕರಿಯೂ, ಬೇಸರವೂ ಕೋಪತಾಪಗಳೂ ಬರತೊಡಗಿದುವು. ಅದನ್ನು ಕೇಳಿ, ತಾನು ಮಾಡಿಸಿದ ಒಳ್ಳೆಯ ಕಾರ್ಯವು ಹೀಗೇಕೆ ವಿಕೃತವಾಯಿತೋ ಎಂದು ವೆಂಕಯ್ಯನಿಗೆ ವಿಚಾರ ಹಿಡಿಯಿತು. ಅಸಲು ಇಂತಹ ಪರಿಸ್ಥಿತಿ ಏಕೆ ಬಂದಿತೆಂದು ಸ್ವತಃ ತಿಳಿದುಕೊಳ್ಳಲು ಒಂದು ದಿನ ವೆಂಕಯ್ಯ ಮಾವ ಸೋದರಳಿಯನ ಮನೆಗೆ ಬಂದನು.

ಅವನು ಬಂದಾಗ ಮನೆಯಲ್ಲಿ ಅವನಿಗೆ ತಿಳಿಯದ ಅನೇಕ ಹೊಸ ಮುಖಗಳು ಕಂಡು ಬಂದುವು. ಅವರ ನಡುವೆ ವೆಂಕಯ್ಯಮಾವ ಬಂದರೆಂದು ತಿಳಿದು ಧರ್ಮರಾಜನೂ, ಅವನ ಹೆಂಡತಿ ವಿಶಾಲಾಕ್ಷಿಯೂ ಅವನನ್ನು ಅತ್ಯಾದರದಿಂದ ಸ್ವಾಗತ ಮಾಡಿದರು.

ವೆಂಕಯ್ಯ ಧರ್ಮರಾಜನನ್ನು ಬದಿಗೆ ಕರೆದು, "ಇವರೆಲ್ಲಾ ಯಾರು ?" ಎಂದು ಕೇಳಿದನು.

"ನಮ್ಮ ಬಂಧುಗಳೇ ಮಾವಯ್ಯಾ. ನನ್ನ ತಾಯಿಯ ತಂದೆಯ ವರಿಸೆಯಲ್ಲಿ ನನಗೆ ಏನೇನೋ ಹತ್ತಿರದವರಂತೆ. ಕೆಲವರು ವಿಶಾಲಾಕ್ಷಿಗೆ ಏನೋ ಆಗಬೇಕಂತೆ. ರಾಜಧಾನಿಯಲ್ಲಿ ಏನೋ ಕೆಲಸ ಮುಗಿದ ಮೇಲೆ ಹೋಗುತ್ತಾರೆ" ಎಂದನು ಧರ್ಮರಾಜ.

"ಓಹೋ !" ಎಂದು ತಲೆಯಾಡಿಸಿ ಸುಮ್ಮನಾದನು ವೆಂಕಯ್ಯ. ಆಮೇಲೆ ಮನೆಯಲ್ಲಿ ಸೇರಿದ್ದ ಒಬ್ಬೊಬ್ಬರೇ ವೆಂಕಯ್ಯನನ್ನು ಮಾತಾಡಿಸಿ, ತಮ್ಮ ಬಾಂಧವ್ಯದ ವಿವರ ತಿಳಿಸಿ, ಅವರವರ ತಲಾಂತರ ಶಾಖಾಂತರಗಳನ್ನು ಹೇಳ ತೊಡಗಿದರು. ಈ ಬಗೆಯ

ಬಿ. ಎ. ರಾವ್

ಬಾಂಧವ್ಯದ ತೆರೆಯೊಳಗೆ, ಕುಳಿತು ನೆಲದಡಿಯ ಹೆಗ್ಗಣಗಳ ಹಾಗೆ ಸೋದರಳಿಯನ ಮನೆಗೆ ಬಂದು ಗಂಡ ಹೆಂಡಿರೊಳಗಿನ ಶಾಂತಿ ಸಂತೋಷ ನೆಮ್ಮದಿಗಳನ್ನು ಕೆಡಿಸುತ್ತಾರೆಂದು ವೆಂಕಯ್ಯನಿಗೆ ಗೊತ್ತಾಯಿತು.

ಧರ್ಮರಾಜನು ಕೆಲಸಕ್ಕೆ ಹೊರಟು ಹೋದ ಮೇಲೆ ವೆಂಕಯ್ಯನು ವಿಶಾಲಾಕ್ಷಿಯನ್ನು ಕರೆದು, "ಏನಮ್ಮಾ ? ಮನೆ ಸಮಾಚಾರವೆಲ್ಲಾ ಸರಿಯಾಗಿದೆಯೆ ? ನಿನಗೇನೂ ಕೊರತೆ ಇಲ್ಲವಷ್ಟೆ ? " ಎಂದು ವಿಚಾರಿಸಿದನು.

ವಿಶಾಲಾಕ್ಷಿ ಚಿಂತೆಯ ಮುಖ ಮಾಡಿಕೊಂಡು, "ನೀವೇ ನೋಡಿದಿರಲ್ಲ ಚಿಕ್ಕಪ್ಪಯ್ಯಾ ? ನಾನು ಏನೂ ಅಂತ ಹೇಳಲಿ ? ದಿನಾ ಒಂದು ಶ್ವಾಸ ಸರಿಯಾಗಿ ಬಿಡಲಿಕ್ಕೂ ಆಗದ ಹಾಗೆ, ಯಾರೋ ಒಬ್ಬರು ಏನೋ ಸಂಬಂಧ ಹೇಳಿಕೊಂಡು ಬರುತ್ತಾ ಹೋಗುತ್ತಾ ಇರುತ್ತಾರೆ. ಇವರಿಗೆಲ್ಲಾ ಅದೂ ಇದೂ ಬೇಯಿಸಿ, ಕಾಯಿಸಿ, ಹಾಕುವುದರಲ್ಲಿ ನನ್ನ ಸೊಂಟ ಮುರಿಯುತ್ತಾ ಇದೆ. ತಿಂಗಳಿಗಾಗುವಷ್ಟು ಅವರು ಸಾಮಾನು ತಂದು ಹಾಕಿದರೆ ಹತ್ತು ದಿನ ಕೂಡಾ ಬರೋದಿಲ್ಲ. ಪುನಃ ಅದಿಲ್ಲಾ ಇದಿಲ್ಲಾ ಅಂದರೆ ಕಸ್‌ಭುಸ್ ಅಂತ ರೇಗಿ ಬೀಳ್ತಾರೆ ! ಇವರಾದರೂ ಏನು ಮಾಡಿಯಾರು " ಎಂದಳು.

ಮತ್ತೇನು ಮಾಡಿಯಾರು ಈ ಗಂಡ ಹೆಂಡಿರು ? ತಮ್ಮೊಳಗೆ ಕಚ್ಚಾಡಿ ಕೊಳ್ಳುವುದರ ಹೊರತು ? ಎಲ್ಲವೂ ಸ್ಪಷ್ಟವಾಯಿತು ವೆಂಕಯ್ಯನಿಗೆ.

ಧರ್ಮರಾಜನು ಒಬ್ಬನೇ ಇದ್ದ ಸಮಯ ನೋಡಿ ಅವನೊಡನೆಯೂ ಇನ್ನಿಷ್ಟು ಕೆದಕಿ ನೋಡಿದನು ವೆಂಕಯ್ಯ. ಆಗ ಧರ್ಮರಾಜನು ಕೆರಳಿ, " ಏನೇ ಹೇಳಿ ಮಾವಯ್ಯಾ. ನೀವು ನನ್ನ ಕೊರಳಿಗೆ ವಿಶಾಲಾಕ್ಷಿ ಎಂಬ ಚಂದದ ಹೆಸರಿನ ಗುಂಡುಗಲ್ಲನ್ನೇ ಕಟ್ಟಿ ಹಾಕಿದ್ದೀರಿ. ಅದರಿಂದ ನನ್ನ ಉಸಿರೇ ಸಿಕ್ಕಿಕೊಳ್ಳುತ್ತದೆ. ನೀವು ಅಂದುಕೊಂಡ ಹಾಗೆ ಅವಳು ಸಮಯ ಸಾಧಕವಾದ ತಿಳುವಳಿಕೆಯುಳ್ಳ ಹುಡುಗಿಯೇನಲ್ಲ. ಬರೀ ಜಗಳಗಂಟಿ! ಇರಲಿ ಬಿಡಿ,ನನ್ನ ಕರ್ಮ ! " ಎಂದನು.



"ಅಷ್ಟರ ಮಟ್ಟಿಗೆ ಆಯಿತಾದರೂ ಏನೋ ?" ಎಂದು ಮತ್ತೆ ಕೇಳಿದ ವೆಂಕಯ್ಯ. "ಪ್ರತಿ ಸಣ್ಣ ವಿಷಯಕ್ಕೂ ರಾದ್ಧಾಂತ ಮಾಡ್ತಾಳೆ. ಮನೆ ಖರ್ಚಿಗೆ ಅಂತ ತಿಂಗಳಿಗೆ ಸರಿ ಬರುವಷ್ಟು ಸಾಮಾನು ತಂದು ಮನೆಗೆ ಹಾಕುತ್ತೇನಷ್ಟೆ ? ಅದಷ್ಟೂ ಒಂದು ವಾರದೊಳಗೆ ಮುಗಿಸಿ ಲಗಾಡಿ ತೆಗೆಯುತ್ತಾಳೆ. ಇದೇನೆಂದು ಕೇಳಿದರೆ ಒಂಟಿಕಾಲಲ್ಲಿ ನಿಂತು ಅವರಿವರನ್ನು ದೂರುತ್ತಾಳೆ. ಸ್ವಲ್ಪವೂ ಹಿತಮಿತ ಇಲ್ಲದವಳು. ನಾನೇನು ಲಕ್ಷಾಧಿಕಾರಿಯೋ ಮಾವಯ್ಯಾ ? ನನಗೆ ಬರುವ ಸಂಬಳದಲ್ಲೇ ಎಲ್ಲವನ್ನೂ ನೋಡಿಕೊಳ್ಳಬೇಕೋ ಬೇಡವೋ?" ಎಂದು ಬೇಸರದಿಂದ ಹೇಳಿದ ಧರ್ಮರಾಜ.

ವೆಂಕಯ್ಯನು ನಿಜನಿಜವೆಂಬಂತೆ ತಲೆಯಾಡಿಸಿದನೇ ಹೊರತು ಮತ್ತೇನೂ ಹೇಳಲಿಲ್ಲ. ಹೀಗೆ ಒಂದು ಮನೆಗೆ ಜಮೀನ್ದಾರರ ಮನೇ ಹಾಗೆ ಬರುವವರು, ಉಳಿಯುವವರು, ಹೊರಟು ಹೋಗುವವರು ಅಂತ ವಾಡಿಕೆಯಾದರೆ ಮನೆ ದಿವಾಳಿ ತೆಗೆಯದೆ ಇರದು. ನಿಜಕ್ಕೂ ಧರ್ಮರಾಜನ ಉದ್ಯೋಗವು ಸಣ್ಣದೇನಲ್ಲ. ಅವನಿಗೆ ಬರುವ ಸಂಬಳ, ಗಂಡ ಹೆಂಡಿರು ಹಾಯಾಗಿ ತಿಂದುಂಡು ಮಿಗಿಲಿಸುವಷ್ಟು ಇದ್ದಿತು.

ಇದಕ್ಕೇನಾದರೂ ಮಾಡಲೇ ಬೇಕೆಂದು ವೆಂಕಯ್ಯ ಮನಸ್ಸಿನೊಳಗೇ ಎಣಿಕೆ ಹಾಕಿಕೊಂಡನು. ಸತ್ರದ ಹಾಗೆ ಯಾವಾಗಲೂ ಜನರು ಓಡಾಡಿ ಕೊಂಡಿದ್ದರೆ ಗಂಡಹೆಂಡಿರು ಮನಸ್ಸು ಬಿಚ್ಚಿ ಮಾತಾಡಿ ಕೊಳ್ಳಲಿಕ್ಕಾದರೂ ಸಾಧ್ಯವೆಲ್ಲಿದೆ ? ಒಬ್ಬರ ಕಷ್ಟವನ್ನು ಒಬ್ಬರೊಡನೆ ಹೇಗೆ ಪರಿವರ್ತಿಸಿಕೊಂಡಾರು ? ಮಾನಸಿಕವಾಗಿ ಒಬ್ಬರಿಗೊಬ್ಬರು ದೂರ ದೂರವಾಗುತ್ತ, ಅವರಿಬ್ಬರ ಮಧ್ಯೆ ಅಗಾಧವಾದ ಕಣಿವೆ ಏರ್ಪಡುವುದೇ ನಿಜ.

ವೆಂಕಯ್ಯ ನಗರದಲ್ಲಿ ಮತ್ತೆ ಎರಡು ದಿನಗಳವರೆಗೆ ಇದ್ದು, ತನಗೆ ತಿಳಿದ ಕೆಲವರನ್ನು ಸಂಧಿಸಿ ರಾಜಧಾನಿಗೆ ಬಹಳ ದೂರವಾಗಿದ್ದ ಒಂದು ಪ್ರದೇಶಕ್ಕೆ ಧರ್ಮರಾಜನಿಗೆ ವರ್ಗವಾಗುವಂತೆ ಏರ್ಪಾಡು ಮಾಡಿದನು.

ಅಲ್ಲಿಗೆ ಹೋದ ಮೊದಲಿನಲ್ಲಿ ಧರ್ಮರಾಜನು ರಾಜಧಾನಿಯಲ್ಲಿರುವ ಸೌಕರ್ಯಗಳು ಅಲ್ಲಿಲ್ಲವೆಂದು ಸ್ವಲ್ಪ ನೊಂದುಕೊಂಡನು. ಆದರೆ ಮನೆಗೆ ಬರುವ ಸಂಬಂಧಿಕರ ಕಾಟವೇನಿಲ್ಲದೆ, ತನ್ನ ಹೆಂಡತಿ ಬಂಗಾರದಂಥವಳಾಗಿ ಕಾಣತೊಡಗಿದಳು. ಮನೆ ಸ್ವರ್ಗದಂತೆ ತಾವೀರ್ವರೂ ದೇವೇಂದ್ರ ಶಚಿಯರಂತೆ ತೋರತೊಡಗಿತು ಆ ದಂಪತಿಗಳಿಗೆ.

ತನ್ನ ಸೋದರಳಿಯನೂ ಹೆಂಡತಿಯೂ ತುಂಬ ಅನ್ಯೋನ್ಯರಾಗಿರುವುದನ್ನು ತಿಳಿದು ವೆಂಕಯ್ಯ ಮಾವ ತನ್ನೊಳಗೆ ತೃಪ್ತಿಯಾಗಿ ನೆಗಾಡಿಕೊಂಡನು.





# ವರಹಗಳ ಮೂಟೆ

ಬ್ರಹ್ಮದತ್ತರಾಜನು ಕಾಶೀ ರಾಜ್ಯವನ್ನು ಪರಿಪಾಲಿಸಿಕೊಂಡಿದ್ದ ಕಾಲದಲ್ಲಿ ಬೋಧಿಸತ್ವನು ಒಬ್ಬ ಭೂಸ್ವಾಮಿಯ ಕುಮಾರನಾಗಿ ಜನಿಸಿದನು. ಅವನ ಜನನದಿಂದ ಭೂಸ್ವಾಮಿಗೆ ಒಳ್ಳೆಯದಾಗುತ್ತಾ ಬಂದಿತು. ಬೋಧಿಸತ್ವನು ಬೆಳೆದು ದೊಡ್ಡವನಾಗುತ್ತಾ ಬಂದಂತೆ, ಅವನ ಕುಟುಂಬವು ಇಮ್ಮಡಿ ಮುಮ್ಮಡಿ ಸಂಪನ್ನತೆಯಿಂದ ತುಂಬಿತು. ಬೋಧಿಸತ್ವನಿಗೆ ಒಬ್ಬ ತಮ್ಮನು ಕೂಡಾ ಇದ್ದನು.

ಹೀಗೆ ಕಾಲವು ಕ್ರಮಿಸುತ್ತಿರಲು ಭೂಸ್ವಾಮಿಗೆ ವಯಸ್ಸಾಗಿ ಒಂದು ದಿನ ಕಾಲಧರ್ಮವನ್ನು ಹೊಂದಿದನು. ಕುಟುಂಬವನ್ನು ನಡೆಸಬೇಕಾದ ಭಾರ ಬೋಧಿಸತ್ವನ ಮೇಲೆಯೇ ಬಿದ್ದಿತು. ಅವರ ಕುಟುಂಬಕ್ಕೆ ಸಂಬಂಧಿಸಿದ ಧನದ ಲೆಕ್ಕದಲ್ಲಿ ದೂರದ ಒಂದು ಗ್ರಾಮದಿಂದ ಕೂಡಾ ಹಣವು ಬರಬೇಕಾಗಿತ್ತು. ಅದನ್ನು ವಸೂಲು ಮಾಡಿಕೊಂಡು ಬರಲು ಅಣ್ಣ ತಮ್ಮಂದಿರಿಬ್ಬರೂ ಅಲ್ಲಿಗೆ ಹೋದರು. ಅಲ್ಲಿಯ ರೈತರಿಂದ ತಮಗೆ ಬರಬೇಕಾದ ಧಾನ್ಯ ತರಕಾರಿ ಮೊದಲಾದುವುಗಳಿಂದ ಸೇರಿದ ಹಣ ನಗದು ಸಾವಿರ ವರಹಗಳಾದುವು.

ಆ ಹಣವನ್ನು ತೆಗೆದುಕೊಂಡು ಅಣ್ಣ ತಮ್ಮಂದಿರಿಬ್ಬರೂ ಕಾಶೀ ನಗರಕ್ಕೆ ಹೊರಟರು. ದಾರಿ ಬಹು ದೂರವಾದುದರಿಂದ ಇಬ್ಬರೂ ಕೈ ಬದಲಾಯಿಸಿಕೊಂಡು ವರಹಗಳ ಮೂಟೆಯನ್ನು ಹಿಡಿದುಕೊಂಡು ಹೋಗುತ್ತಿದ್ದರು. ದಾರಿಯಲ್ಲಿ ಒಂದು ನದಿ ಅಡ್ಡ ಬರುತ್ತಿದ್ದಿತು. ಇವರು ಹೋದಾಗ ಅಲ್ಲಿ ದೋಣಿ ಇರಲಿಲ್ಲ. ದೋಣಿಯವನು ಬರಲು ಇನ್ನೂ ಬಹಳ ಹೊತ್ತು ಕಾಯಬೇಕಾಗಿತ್ತು. ಆದುದರಿಂದ ಅಣ್ಣ ತಮ್ಮಂದಿರು ತಮ್ಮೊಂದಿಗೆ ತಂದಿದ್ದ ಫಲಾಹಾರದ ಗಂಟನ್ನು ಬಿಚ್ಚಿ ತಿಂದು ಹಸಿವೆಯನ್ನು ಅಡಗಿಸಿಕೊಂಡು ನೀರು ಕುಡಿದರು. ಬೋಧಿಸತ್ವನು ತನ್ನ ಅಭ್ಯಾಸದಂತೆ ತನ್ನ ಪಾಲಿನ ಸ್ವಲ್ಪ ಫಲಹಾರವನ್ನು ಉಳಿಸಿ ಅದನ್ನು ನದಿಯೊಳಗೆ ಚೆಲ್ಲಿದನು.

ಬೋಧಿಸತ್ವನು ನದಿಗೆ ಹಾಕಿದ ತಿಂಡಿಗಳನ್ನು ನದಿಯಲ್ಲಿದ್ದ ಒಂದು ಜಲಭೂತವು ಸ್ವೀಕರಿಸಿಕೊಂಡಿತು. ಆ ತಿಂಡಿಗಳನ್ನು ತಿಂದ ಕೂಡಲೇ ಅದಕ್ಕೊಂದು ವಿಶೇಷ ಶಕ್ತಿಯುಂಟಾಯಿತು. ಅದರ ಆಲೋಚನೆಯ ಶಕ್ತಿ ಅರಳಿತು. ತನ್ನ ಕಡೆಗೆ ಆಹಾರ ಹಾಕಿದವನು ಯಾರೆಂದು ಅದಕ್ಕೆ ಗೊತ್ತಾಯಿತು.

ಹಸಿವೆ ತೀರಿದ ಮೇಲೆ ಬೋಧಿಸತ್ವನಿಗೆ, ನಿದ್ದೆ ಬರುವ ಹಾಗೆ ತೋರಲು. ಮರಳು ದಿಬ್ಬದ ಮೇಲೆ ಬಟ್ಟೆ ಹರಡಿ ಮಲಗಿದನು. ತಮ್ಮನು ಅಣ್ಣನಿಗೆ ನಿದ್ದೆ ಬರುವುದನ್ನೇ ಕಾಯುತ್ತಿದ್ದನು.

ತಮ್ಮನಿಗೆ ಕಳ್ಳ ಬುದ್ಧಿಯಿದ್ದಿತು. ಈ ಸಾವಿರ ವರಹಗಳನ್ನು ಅಣ್ಣನಿಗೆ ಬಿಡದೆ, ತಾನೇ ತನ್ನಿಷ್ಟ ಪ್ರಕಾರ ಖರ್ಚು ಮಾಡಲು ಇಟ್ಟುಕೊಳ್ಳಬೇಕೆಂದು ಎಣಿಕೆ ಹಾಕಿಕೊಂಡಿದ್ದನು. ಬೋಧಿಸತ್ವನಿಗೆ ನಿದ್ದೆ ಬಂದ ಕೂಡಲೇ ಅವನು, ವರಹಗಳ ಮೂಟೆ ಯಂತೆಯೇ ಕಲ್ಲುಗಳಿಂದ ಇನ್ನೊಂದು ಮೂಟೆಯನ್ನು ತಯಾರಿಸಿಕೊಂಡು, ಅಣ್ಣನಿಗೆ ಗೊತ್ತಾಗದ ಹಾಗೆ ತನ್ನ ದುಸ್ತಿನೊಳಗೆ ಅಡಗಿಸಿಕೊಂಡನು.

ಸ್ವಲ್ಪ ಹೊತ್ತಿನ ಮೇಲೆ ದೋಣಿಯವನು ಬಂದನು. ನಿದ್ದೆಯಿಂದೆದ್ದ ಬೋಧಿಸತ್ವನೂ ಅವನ ತಮ್ಮನೂ ದೋಣಿಯನ್ನೇರಿಕೊಂಡರು. ಎರಡು ಮೂಟೆಗಳೂ ಒಂದೇ ಮೂಟೆಯ ಹಾಗೆ ತಮ್ಮನ ದುಸ್ತಿನೊಳಗಿರುವುದನ್ನು ಬೋಧಿಸತ್ವನು ನೋಡಿದರೂ, ಅದು ಸ್ವಲ್ಪ ದೊಡ್ಡದಾಗಿರುವುದರ ಕಡೆಗೆ ಅವನ ಲಕ್ಷ್ಯ ಹೋಗಲಿಲ್ಲ.

ದೋಣಿ ನದಿಯ ಮಧ್ಯದಲ್ಲಿ ಹೋಗುವಾಗ, ಬೋಧಿಸತ್ವನು ತೀರದ ಸೌಂದರ್ಯವನ್ನು ನೋಡುವುದರಲ್ಲಿ ಮಗ್ನನಾಗಿದ್ದಾಗ. ತಮ್ಮನು ತಾನು ಮಾಡಿಕೊಂಡ ಯುಕ್ತಿಯ ಪ್ರಕಾರ, ಒಂದು ಮೂಟೆ ಯನ್ನು ಆಹಾರದ ಚೀಲದೊಳಗೆ ಅಡಗಿಸಿಟ್ಟು, ಇನ್ನೊಂದು ಮೂಟೆಯನ್ನು ನದಿಯೊಳಗೆ ಜಾರಿಸಿ ಬಿಟ್ಟನು. ಮೊದಲೇ ಕಳ್ಳತನದ ಕೆಲಸವಾದುದರಿಂದ, ಅವನ ಮೈ ಕೈ ನಡುಗುತ್ತಿರಲು, ನಡುಗುವ ಸ್ವರ ದಿಂದ, "ಅಣ್ಣಾ ! ವರಹಗಳ ಮೂಟೆ ನದಿಗೆ ಬಿದ್ದಿತಲ್ಲಾ !" ಎಂದು ಕೂಗಿದನು.

ಅವನ ಭಯವನ್ನೂ ಆರ್ತತೆಯನ್ನೂ ನೋಡಿ ಅಣ್ಣನು, "ಹೋಗಲಿ ಬಿಡು ತಮ್ಮಾ. ಅದು ನಮ್ಮ ಸೊತ್ತು ಅಲ್ಲವೆಂದು ತಿಳಿದರಾಯಿತು. ಆದ್ದರಿಂದಲೇ ಅದು ನದಿಗೆಬಿದ್ದಿದೆ. ಅದಕ್ಕಾಗಿ ಚಿಂತಿಸಿಕೊಂಡಿರುವುದು ಅವಿವೇಕವೇ ಸರಿ. ಏನೂ ಚಿಂತಿಸಬೇಡ" ಎಂದನು.



ಬೋಧಿಸತ್ವನು ನದಿಗೆ ಬೀಸಿದ ಆಹಾರವನ್ನು ತಿಂದ ಜಲಭೂತವು ತನ್ನ ಜ್ಞಾನದಿಂದ ಬೋಧಿಸತ್ವನ ದೋಣಿಯನ್ನೇ ಅನುಸರಿಸಿಕೊಂಡಿತ್ತು. ನದಿಗೆ ಬಿದ್ದುದು ವರಹಗಳ ಮೂಟೆಯೆಂದು ಅದಕ್ಕೆ ಗೊತ್ತಾಯಿತು. ಅದು ಕೂಡಲೆ ಆ ಮೂಟೆಯನ್ನು ದೊಡ್ಡದೊಂದು ಮೀನು ನುಂಗುವ ಹಾಗೆ ಮಾಡಿತು. ಆಮೇಲೆ ಅವರೊಂದಿಗೇ ತಿರುಗಿಕೊಂಡಿತ್ತು.

ಬೋಧಿಸತ್ವನೂ ಅವನ ತಮ್ಮನೂ ಕಾಶೀ ನಗರವನ್ನು ತಲಪಿದರು. ಅಣ್ಣನಿಗೆ ತಿಳಿಯದಂತೆ ಆಹಾರದ ಮೂಟೆಯಲ್ಲಿ ಅಡಗಿಸಿಟ್ಟುಕೊಂಡ ವರಹಗಳ ಮೂಟೆಯನ್ನು ತಮ್ಮನು ಮನೆಗೆ ತಲಪಿದಮೇಲೆ, ರಹಸ್ಯವಾಗಿ ತೆಗೆದು ಬಿಡಿಸಿ, ಅದರೊಳಗೆ ಕಲ್ಲುಗಳಿರುವುದನ್ನು ನೋಡಿ ಆಕಾಶವೇ ಕಳಚಿಬಿದ್ದಂತೆ ಅಸ್ವಸ್ಥನಾದನು. ಕೊರಗುತ್ತಾ ಹಾಸಿಗೆ ಹಿಡಿದನು. ತನ್ನ ಬುದ್ಧಿಯನ್ನು ನಿಂದಿಸುತ್ತಾ ತಲೆ ಚಚ್ಚಿಕೊಂಡನು.

ಒಂದು ದಿನ ಮೀನುಗಾರರು ನದಿಯಲ್ಲಿ ಬಲೆ ಹಾಕಿದರು. ಜಲಭೂತವು ತನ್ನ ಶಕ್ತಿಯಿಂದ ವರಹಗಳ ಮೂಟೆ ನುಂಗಿದ ಮೀನು ಆ ಬಲೆಯೊಳಗೆ ಸಿಕ್ಕುವಂತೆ ಮಾಡಿತು. ಅದಕ್ಕೆ ಒಂದು ಮಾತನ್ನು ತಿಳಿಸಿ, ಹಾಗೆ ಮಾಡಿದರೆ ಸದ್ಗತಿಯುಂಟಾಗುತ್ತದೆಂದೂ ಹೇಳಿತು ಆ ಜಲಭೂತ.

ಮೀನುಗಾರರು ಬಲೆಯಲ್ಲಿ ಬಿದ್ದ ಆ ಮೀನನ್ನು ಎಳೆದುಕೊಂಡರು. ಭಾರವಾದ ಆ ಮೀನು ಸಾಯುವ ಮೊದಲು ಹೇಳಿದ ಮಾತನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು. ಅದು ಹೇಳಿದ ಹಾಗೆಯೇ ಮಾಡಲು ನಿರ್ಧರಿಸಿ ಮೀನುಗಾರರ ಮುಖಂಡನು ಆ ಮೀನನ್ನು ಮಾರಲು ಒಯ್ದನು. ಕೇಳಿದವರೊಂದಿಗೆ ಅದರ ಬೆಲೆ, "ಸಾವಿರ ವರಹಗಳು, ಮತ್ತು ಮೇಲೊಂದು ವರಹ !" ಎನ್ನುತ್ತಿದ್ದನು.

ಅದನ್ನು ಕೇಳಿ ಮೀನುಗಾರನಿಗೆ ಬುದ್ಧಿಕೆಟ್ಟದೆಯೆಂದು ಜನರು ನಗತೊಡಗಿದರು. ಅವನು ತನ್ನವರೊಂದಿಗೆ ಆದನ್ನು ತೆಗೆದುಕೊಂಡು ಬೋಧಿಸತ್ವನ ಮನೆಗೆ ಹೋಗಿ, "ಈ ಮೀನನ್ನು ನೀವೇ ಕೊಂಡುಕೊಳ್ಳಿ ಸ್ವಾಮೀ" ಎಂದನು.



ಬೋಧಿಸತ್ವನು ಅದರ ಬೆಲೆ ಎಷ್ಟೆಂದು ಕೇಳಿದನು. "ನಿಮಗಾದರೆ ಒಂದೇ ವರಹ" ಎಂದನು ಮೀನುಗಾರ.

"ಬೇರೆಯವರಿಗಾದರೆ ಯಾವ ಬೆಲೆಗೆ ಮಾರುವಿಯಪ್ಪಾ ? ನಿನ್ನ ಮಾತು ಏನೋ ವಿಚಿತ್ರವಾಗಿದೆ ?" ಎಂದನು ಬೋಧಿಸತ್ವ.

ಬೇರೆಯವರು ಕೊಂಡುಕೊಳ್ಳುವುದಾದರೆ ಸಾವಿರ ವರಹಗಳ ಮೇಲೆ ಮತ್ತೊಂದು ವರಹ ತೆಗೆದುಕೊಳ್ಳುತ್ತೇನೆ. ಅದು ಈ ಮೀನಿನ ಇಚ್ಛೆಯ ಹಾಗೆಯೇ ಕಟ್ಟಿದ ಬೆಲೆ. ನಿಮ್ಮಿಂದ ಒಂದೇ ವರಹ ತೆಗೆದುಕೊಳ್ಳಬೇಕಂತೆ" ಎಂದನು ಮೀನುಗಾರ.

ಬೋಧಿಸತ್ವನು ಆಶ್ಚರ್ಯದಿಂದ ಒಂದು ವರಹ ಕೊಟ್ಟು, ಆ ಮೀನನ್ನು ಕೊಂಡುಕೊಂಡನು. ಅವನೂ ಅವನ ಹೆಂಡತಿಯೂ ಆ ಮೀನನ್ನು ಕೊಯ್ಯುವಾಗ ಅದರ ಹೊಟ್ಟೆಯಲ್ಲಿ ವರಹಗಳ ಮೂಟೆ ಸಿಕ್ಕಿತು. ಬೋಧಿಸತ್ವನು ಅದರ ಗುರುತು ಹಿಡಿದು, "ಇದು ನಮ್ಮದೇ ಮೂಟೆ!" ಎಂದು ಹೆಂಡತಿಗೆ ನಡೆದ ಸಂಗತಿಯನ್ನೆಲ್ಲಾ ಹೇಳಿದನು.

"ಈ ಮೀನು ಸಾಧಾರಣದ ಮೀನಾಗಿಲ್ಲ. ಯಾವುದೋ ದಿವ್ಯಶಕ್ತಿಯ ಮೀನು ಇದು. ನದಿಗೆ ಬಿದ್ದ ನಮ್ಮ ಸೊತ್ತು ನಮಗೆ ಮತ್ತೆ ಸಿಗುವ ಹಾಗೆ, ಎಂತಹ ತ್ಯಾಗ ಮಾಡಿತು! ತಾನು ಸತ್ತರೂ ಮೀನುಗಾರರು ನಮ್ಮ ಮನೆಗೇ ತಂದುಕೊಡುವ ಹಾಗೆ ಪ್ರೇರೇಪಿಸಿಯೇ ಪ್ರಾಣಬಿಟ್ಟಿದೆ" ಎಂದು ಬೋಧಿಸತ್ವನು ಆ ಮೀನಿಗೆ ಒಳ್ಳೆಯ ಸಂಸ್ಕಾರ ನಡೆಸಿದನು.

"ನೋಡಿದೆಯಾ ತಮ್ಮಾ ! ನದಿಗೆ ಬಿತ್ತೆಂದು ನೀನು ಚಿಂತಿಸಿದೆಯಲ್ಲಾ! ಆ ಧನವಷ್ಟೂ ಹೇಗೆ ಬಂದಿತು ನೋಡಿದೆಯಷ್ಟೆ?" ಎಂದನು.

ಆಗ ಅವನ ತಮ್ಮನು ಅಳುತ್ತಾ, ಕಣ್ಣೀರು ಸುರಿಸುತ್ತಾ, ತಾನು ಮಾಡಿದ ಕೆಲಸವನ್ನು ಹೇಳಿ, ಕ್ಷಮಿಸುವಂತೆ ಅಣ್ಣನ ಕಾಲಿಗೆ ಬಿದ್ದನು. ತಮ್ಮನಿಗೆ ಒಳ್ಳೆಯ ಬುದ್ಧಿ ಬರುವಂತೆ ಮಾಡಿದ ಮೀನನ್ನು ನೆನೆಯುತ್ತಾ, ಬೋಧಿಸತ್ವನು ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಧ್ಯಾನಿಸಿದನು. ಆಗ ಜಲಭೂತವು ಅವನ ಮನೋದೃಷ್ಟಿಗೆ ತೋರಿ, "ನನಗೆ ಆಹಾರ ಹಾಕಿದ ನಿನ್ನ ದೊಡ್ಡ ಗುಣವನ್ನು ಮೆಚ್ಚಿ, ನಿನ್ನ ಸೊತ್ತು ನಿನಗೆ ಸಿಗುವಂತೆ ಮಾಡಿದೆನು. ನಿನ್ನ ತಮ್ಮನು ಒಳ್ಳೆಯವನಲ್ಲ. ಅವನಿಗೆ ಏನೂ ಕೊಡದೆ ಮನೆಯಿಂದ ಹೊರಗೆ ಹಾಕಿ ಬಿಡು" ಎಂದಿತು.

ಆದರೆ ಬೋಧಿಸತ್ವನು ಹಾಗೆ ಮಾಡಲಿಲ್ಲ. ತಮ್ಮನ ಬೆನ್ನು ತಟ್ಟಿ ಐನೂರು ವರಹಗಳನ್ನು ಅವನಿಗೆ ಕೊಟ್ಟು ಇಷ್ಟದಂತೆ ಖರ್ಚು ಮಾಡಲು ಹೇಳಿದನು. ಒಳ್ಳೆಯವನಾದ ತಮ್ಮನು ಅಣ್ಣನ ಸ್ಮಾರಕವಾಗಿ ಆ ವರಹಗಳನ್ನು ಹಾಗೆಯೇ ಕಡೆ ತನಕ ಇಟ್ಟುಕೊಂಡಿದ್ದನು.





# ಕನಿಷ್ಕನ ಕಥೆ

ಎರಡು ಸಾವಿರ ವರ್ಷಗಳ ಹಿಂದೆ ಭಾರತದೇಶದ ಪಶ್ಚಿಮೋತ್ತರ ಸರಿಹದ್ದು ಪ್ರಾಂತಗಳ ಮೇಲೆ ಸಂಚಾರ ಜಾತಿಯವರು ಆಗಾಗ ದಾಳಿ ಮಾಡಿ ಕೊಂಡಿದ್ದರು. ಈ ಜಾತಿಯವರು ಎಲ್ಲಿಯೂ ನೆಲೆಯಾಗಿ ನಿಲ್ಲುವ ಗುಣದವರಲ್ಲದುದರಿಂದ, ಆ ಪ್ರಾಂತಗಳನ್ನು ಪಾಲಿಸುವ ಯಾವ ರಾಜರಿಂದಲೂ ಅವರನ್ನು ನಿರೋಧಿಸಲು ಸಾಧ್ಯವಾಗಲಿಲ್ಲ.

ಕಾಲಕ್ರಮದಲ್ಲಿ ಆ ಸಂಚಾರಜಾತಿಯವರ ಗುಣವು ಬದಲಾಗಿ, ಅವರು ಒಂದು ಕಡೆಯಲ್ಲಿ ಸ್ಥಿರವಾಗಿ ನಿಂತು, ಬೇಸಾಯ ವರ್ತಕತನ ಮೊದಲಾದ ಕೆಲಸಗಳಿಗೆ ತೊಡಗಿದರು.





ಕೆಲವು ವರ್ಷಗಳಲ್ಲಿ ಅವರಲ್ಲಿ ಪ್ರಮುಖರು ಕೆಲವರು ಬಲಿಷ್ಠರಾದರು. ಅವರಲ್ಲಿ ಖಡ್ಫೈಸೀಜನೆಂಬವನು ಪುರುಷಪೂರ್ ಎಂಬ ನಗರವನ್ನು ನಿರ್ಮಿಸಿದ್ದಲ್ಲದೆ. ಒಂದು ರಾಜವಂಶಕ್ಕೂ ಮೂಲ ಪುರುಷನಾದನು. ಆ ವಂಶದ ಮೂರನೆಯವನಾದ ಕನಿಷ್ಕನು ಪುರುಷಪೂರನ್ನು ಶತ್ರುದುರ್ಭೇದ್ಯವಾದ ನಗರವನ್ನಾಗಿ ಮಾಡಿ ಅನೇಕ ರಾಜ್ಯಗಳನ್ನು ಕೂಡಾ ಜಯಿಸಿದನು.



ಕ್ರಿ. ಶ. ೭೮ನೇ ವರ್ಷದಲ್ಲಿ ಕನಿಷ್ಕನು ಒಂದು ನೂತನ ಪಂಚಾಂಗವನ್ನು ನಿರ್ಮಿಸಿದನು. ಅದನ್ನೇ ನಾವು ನಮ್ಮ ಶಕವರ್ಷ ವೆನ್ನುತ್ತೇವೆ. ಒಂದು ಸಾಮ್ರಾಜ್ಯವನ್ನು ಸ್ಥಾಪಿಸಬೇಕೆಂಬ ಹಟದಲ್ಲಿ ಕನಿಷ್ಕನು ದೊಡ್ಡ ಸೈನ್ಯದೊಂದಿಗೆ ಚೈನೀಸ್‌ಟರ್ಕಿಸ್ಥಾನ್, ಯಾರ್‌ಖಂಡ್, ಕಾಷ್ಗರ್ ನಗರಗಳ ಮೇಲೆ ದಾಳಿ ಮಾಡಿ ನೆರೆಹೊರೆಗಳ ಅನೇಕ ರಾಜರನ್ನು ಜಯಿಸಿ ತನ್ನ ಸಾಮಂತರನ್ನಾಗಿ ಮಾಡಿಕೊಂಡನು.

ಅಷ್ಟಾದ ಮೇಲೆ ಕನಿಷ್ಕನು ಸಾಧುಗುಣದ ಪರಿಪಾಲಕನಾಗಿ ಬದಲಾವಣೆಗೊಂಡನು. ಅವನು ದೊಡ್ಡದೊಂದು ಪಂಡಿತಪರಿಷತ್ತನ್ನು ಕಾಶ್ಮೀರದ ಕುಂಡಲ ವಿಹಾರವೆಂಬಲ್ಲಿ ಸಮಾವೇಶಗೊಳಿಸಿದನು. ಆ ಸಮಾವೇಶದ ನಿರ್ಣಯಗಳನ್ನು ತಾಮ್ರರೇಕುಗಳ ಮೇಲೆ ಕೊರೆಯಿಸಿ ಮುಂದಿನವರ ತಿಳುವಳಿಕೆಗೆ ಬರುವಂತೆ ಭದ್ರಪಡಿಸಿ ಇಡಿಸಿದನು.





ಕನಿಷ್ಕನ ಆಸ್ಥಾನದಲ್ಲಿ ದೊಡ್ಡ ಪಂಡಿತರೂ ಕವಿಗಳೂ ಇದ್ದರು. ಕವಿ ಅಶ್ವಘೋಷನೂ, ತತ್ವಜ್ಞಾನಿಯಾದ ನಾಗಾರ್ಜುನನೂ, ವೈದ್ಯಾಚಾರ್ಯನಾದ ಚರಕನೂ ಅವನ ಆಸ್ಥಾನದವರೇ. ಅವನ ಕಾಲದಲ್ಲಿ ಲಲಿತಕಲೆಗಳು ತುಂಬಾ ಅಭಿವೃದ್ಧಿಗೇರಿದುವು. ಮುಖ್ಯವಾಗಿ ಪರಿಪಕ್ವವಾದುದು ಗಾಂಧಾರ ಶಿಲ್ಪಕಲೆ.

ಮಹಾಕವಿಯಾದ ಅಶ್ವಘೋಷನು ಏಕಾಂತವಾಗಿ ತನ್ನ ಮಾನಸಿಕೋದ್ವೇಗವನ್ನು ಸೂಸವ ಕವಿತ್ವವನ್ನು ಪಠಿಸುತ್ತಿರಲು ಅಶ್ವಗಳು ಕಣ್ಣೀರು ಗರೆಯುವಂತೆ. ಆದುದರಿಂದಲೇ ಅವನಿಗೆ ಅಶ್ವಘೋಷನೆಂದು ಸಾರ್ಥಕನಾಮ ಬಂದಿದೆ. ಅವನು ಬುದ್ಧಚರಿತ್ರೆ ಎಂಬ ಗ್ರಂಥವನ್ನು ಬರೆದನು.





ಮಹಾತತ್ವಜ್ಞಾನಿಯಾದ ನಾಗಾರ್ಜುನನಿಗೆ ಆರ್ಯದೇವನೆಂಬ ಪ್ರತಿಭಾವಂತನಾದ ಶಿಷ್ಯನಿದ್ದನು. ಅವರಿಬ್ಬರೂ ಮೊದಲನೇಸಾರಿ ಕಲೆತುಕೊಂಡಾಗ, ನಾಗಾರ್ಜುನನ ಹಸ್ತದಲ್ಲಿ ಚಿಕ್ಕ ನೀರಿನ ಪಾತ್ರವಿದ್ದಿತು. ಆರ್ಯದೇವನು ತನ್ನ ಕೈಯಲ್ಲಿದ್ದ ಸೂಜಿಯನ್ನು ಅದರಲ್ಲಿ ಜಾರಿಸಿದನು. ಆ ವಿಧವಾಗಿ ಆರ್ಯದೇವನು ತಾನು ಜ್ಞಾನದ ಆಳವನ್ನು ನೋಡಲು ಇಚ್ಛಿಸುತ್ತೇನೆಂಬುದನ್ನು ಸೂಚಿಸಿದನು.

ಪುರಾಣಯುಗದಲ್ಲಿ ಆತ್ರೇಯನೆಂಬ ಋಷಿ, ತನ್ನ ಶಿಷ್ಯನಾದ ಅಗ್ನಿವೇಷನಿಗೆ ವ್ಯಾಧಿಗಳ ಕಾರಣಗಳನ್ನೂ, ಅವುಗಳ ನಿವಾರಣೆಯ ದಾರಿಗಳನ್ನೂ ಬೋಧಿಸಿದನು. ಆ ಗುರು ಶಿಷ್ಯರ ಸಂಭಾಷಣೆಯೇ "ಅಗ್ನಿವೇಷಸಂಹಿತೆ". ಆ ಗ್ರಂಥದ ಹೆಚ್ಚಿನ ಭಾಗವು ಕಾಲಗರ್ಭದಲ್ಲಿ ಕಲೆತು ಹೋಯಿತು.





ಕನಿಷ್ಕನ ಆಶ್ರಯದಲ್ಲಿ ಚರಕನು ವೈದ್ಯಶಾಸ್ತ್ರವನ್ನು ಕುರಿತು ಸಂಶೋಧನೆ ನಡೆಸಿದನು. ಆ ಸಂಶೋಧನೆಯ ಫಲಿತವೇ "ಚರಕಸಂಹಿತೆ". ಔಷಧಿಗಳ ಮೂಲತತ್ವಗಳನ್ನು ತಿಳಿದುಕೊಳ್ಳಲು ಅವನು ಹಿಮಾಲಯಗಳಲ್ಲಿ ಬಹಳ ಕಾಲ ವಾಸಮಾಡಿದ್ದನು.

ಕನಿಷ್ಕನ ಪರಿಪಾಲನೆಯ ಕಾಲದಲ್ಲಿ ಕುಷಾನರು ಉಳಿದ ಭಾರತಜಾತಿಯವರೊಂದಿಗೆ ಜಾತಿ ಸಮೈಕ್ಯತೆ ಹೊಂದಿದರು. ಈ ಕಾರಣದಿಂದಲೇ ಆಮೇಲೆ ಬಹಳ ಕಾಲದವರೆಗೆ ಪಶ್ಚಿಮೋತ್ತರ ದಿಕ್ಕಿನಿಂದ ಬೇರೆ ಯಾವ ಅನಾಗರಿಕ ಜಾತಿಯವರೂ ಭಾರತದೇಶದ ಮೇಲೆ ದಾಳಿ ಬರಲಾಗಲಿಲ್ಲ.





ಪುರುಷಪೂರ್‌ನಲ್ಲಿ ಕನಿಷ್ಕನು ಒಂದು ದೊಡ್ಡ ಸ್ತೂಪವನ್ನು ಕಟ್ಟಿಸಿ ಅದರಲ್ಲಿ ಬುದ್ಧನ ಅಸ್ಥಿಕೆಗಳನ್ನು ಭದ್ರಪಡಿಸಿದನು. ಆ ಕಾಲದ ಪರದೇಶಯಾತ್ರಿಕರು ಹೇಳಿದ ಸಾಕ್ಷ್ಯಾಧಾರಗಳಿಂದ ಆ ಸ್ತೂಪದ ಎತ್ತರ ಅರುವತ್ತು ಅಡಿಗಳು. ಈಗ ಆ ಪುರುಷಪೂರ್ ಪೆಶಾವರ್ ಎನಿಸಿ ಪಾಕಿಸ್ತಾನದಲ್ಲಿ ಮುಖ್ಯ ನಗರವಾಗಿದೆ.

# ಒಳ್ಳೇ ಉಪಾಯ!

**ತು**ಲಸಮ್ಮನ ಕೊರಳಿನಿಂದ ಹತ್ತು ಪವನಿನ ಚಿನ್ನದ ಸರ ಆಕಸ್ಮಾತ್ತಾಗಿ ಬಾವಿಯೊಳಗೆ ಬಿತ್ತು. ಅದು ನೂರಡಿ ಆಳವಾದ ಬಾವಿ. ಅಂತಹ ಬಾವಿಗೆ ಇಳಿಯುವವರು ಕೆಲವರೇ ಇರುತ್ತಾರೆ. ತುಲಸಮ್ಮ ಆ ಬಾವಿಗೆ ಬಿಂದಿಗೆ ಇಳಿಸಿ, ಬಿಂದಿಗೆ ಮುಳುಗಿತೋ ಇಲ್ಲವೋ ಎಂಬುದನ್ನು ತಿಳಿಯಲು ಬಗ್ಗಿದಾಗ ಮೊದಲೇ ಕೊಕ್ಕಿ ಸವೆದಿದ್ದ ಸರ ಬಾವಿಗೆ ಬಿದ್ದುಬಿಟ್ಟಿತ್ತು.

ಬಾವಿಯಲ್ಲಿ ಇಳಿಯುವವರನ್ನು ಕರೆಯಿಸಿದಾಗ, ಅವರು ಚಿನ್ನದ ಸರದ ಬೆಲೆ ತಿಳಿದು, "ಹತ್ತು ರೂಪಾಯಿ ಕೊಡುವಿರಾ ?" ಎಂದು ಕೇಳುತ್ತಿದ್ದರು.

ಆ ಸಮಯದಲ್ಲಿ ಕಳ್ಳರಂಗನು ಆ ದಾರಿಯಾಗಿ ಬರುತ್ತಿದ್ದನು. ಅವನದು ಕಳ್ಳ ಬುದ್ಧಿ ಎಂಬುದು ಎಲ್ಲರಿಗೂ ಗೊತ್ತಿತ್ತು. ಆದರೆ ಈವರೆಗೆ ಅವನನ್ನು ಆಧಾರದೊಂದಿಗೆ ಹಿಡಿಯಲು ಆಗಿರಲಿಲ್ಲ. ಅವನ ಕಿವಿಗೆ ಬೀಳುವ ಹಾಗೆಯೇ ತುಲಸಮ್ಮ, ತನ್ನ ಚಿನ್ನದ ಸರದ ಸಮಾಚಾರವನ್ನು ಅಲ್ಲಿದ್ದವರೊಂದಿಗೆ ವಿಶದವಾಗಿ ಹೇಳುತ್ತಿದ್ದಳು.

ಅದರ ಕಡೆಗೆ ಲಕ್ಷ್ಯವಿಲ್ಲದವನಂತೆ ಕಳ್ಳ ರಂಗನು ತನ್ನ ಪಾಡಿಗೆ ಹೋಗಿಬಿಟ್ಟನು. ಬಾವಿಗಿಳಿಯುವ ಒಳ್ಳೆಯವರು ಸಿಕ್ಕದೆ ತುಲಸಮ್ಮ ಸುಮ್ಮನಾದಳು.

ಆ ದಿನ ರಾತ್ರಿ ಕಳ್ಳ ರಂಗನು ಬಂದು ಬಾವಿಯೊಳಗಿಳಿದು ಚಿನ್ನದ ಸರವನ್ನು ಎತ್ತಿಕೊಂಡು ಮೇಲೆ ಬಂದನು. ಮರುಕ್ಷಣದಲ್ಲಿ ಮನೆಯ ಹಿಂದೆ ಅಡಗಿದ ಹತ್ತು ಜನರು ಬಂದು ಅವನನ್ನು ಹಿಡಿದುಕೊಂಡು, ಚಿನ್ನದ ಸರವನ್ನು ಕಿತ್ತು ತುಲಸಮ್ಮನಿಗೆ ಕೊಟ್ಟು, ಅವನನ್ನು ಕೋತ್ವಾಲನಿಗೆ ಒಪ್ಪಿಸಿದರು.

ಏನೂ ಖರ್ಚಿಲ್ಲದೆ ತುಲಸಮ್ಮನ ಚಿನ್ನದ ಸರ ಸಿಕ್ಕಿದುದು ಮಾತ್ರವಲ್ಲದೆ, ಯಾರಿಗೂ ಸಿಗದೆ ತಪ್ಪಿಸಿಕೊಳ್ಳುವ ರಂಗನನ್ನು ಹಿಡಿದು ಕೊಟ್ಟಳೆಂದು ಎಲ್ಲರೂ ತುಲಸಮ್ಮನನ್ನು ಅಭಿನಂದಿಸಿದರು.





# ಈಗಿನ ಕಾಗೆ

ಈಗಿನ ಶತಮಾನದ ಪ್ರಾರಂಭ ಕಾಲದಲ್ಲಿ ಕಾಕಾಕೊಳವೆಂಬ ಒಂದು ಊರಿನ ಹತ್ತಿರ ಬಾತುಕೇರಿ ಎಂಬ ಸ್ಥಳವಿತ್ತು. ಅಲ್ಲಿ ಒಂದು ದೊಡ್ಡ ನೇರಳೇ ಮರವಿತ್ತು. ಅದರ ಮೇಲೆ ಅನೇಕಾನೇಕ ಕಾಗೆಗಳು ಬಹಳ ಕಾಲದಿಂದ ವಾಸಮಾಡಿಕೊಂಡಿದ್ದವು. ಆ ನೇರಳೇ ಮರಕ್ಕೆ ತುಸು ದೂರದಲ್ಲಿರುವ ಗುಡ್ಡದ ಭಾಗದ ಬಿರುಕಿನಿಂದ ಇಳಿಯುವ ನೀರಿಗೆ ಊರವರು ನಳ ಜೋಡಿಸಿದ್ದರು. ಅಲ್ಲಿ ಸೇರಿದ ನೀರನ್ನು ಕುಡಿಯಲು ಒಯ್ಯುವರು, ಅಲ್ಲಿ ನಿರ್ಮಿಸಲ್ಪಟ್ಟ ಕೊಳದಲ್ಲಿ ಸ್ನಾನಮಾಡುವರು.

ಒಂದುಸಾರಿ ಕಡು ಬೇಸಗೆಯ ಕಾಲಬಂತು. ನೆಲವೆಲ್ಲಾ ಒಣಗಿ ಎಲ್ಲೆಲ್ಲಿಯೂ ಮಹಾ ಬಿಸಿಲಾಯಿತು. ನೀರಿನ ದಾಹ ಹೆಚ್ಚಿತು.

ಒಂದು ಮರಿಕಾಗೆಗೆ ತುಂಬಾ ಬಾಯಾರಿಕೆಯಾಯಿತು. ಅದು ನೀರಿಗಾಗಿ ನೀರಿನ ನಳದ ಹತ್ತಿರ ಬಂತು. ನಳದಲ್ಲಂತೂ ನೀರಿಳಿಯುವುದು ನಿಂತಿತ್ತು. ಅದರ ಬುಡದ ಹೊಂಡದಲ್ಲಿ ಒಂದು ತೊಟ್ಟು ನೀರೂ ಇಲ್ಲ. ಮೊನ್ನೆಯವರೆಗೆ ಸಣ್ಣದಾಗಿ ನಳದಿಂದ ಬೀಳುತ್ತಿದ್ದ ನೀರು ಈಗ ಪೂರ್ತಿ ನಿಂತುಹೋಗಿತ್ತು.

ಮರಿಕಾಗೆ ನೀರಿಗಾಗಿ ಎಷ್ಟೋ ಕಡೆ ತಿರುಗಿ ಎಲ್ಲಿಯೂ ನೀರನ್ನು ಕಾಣದೆ ಮರದ ಕಡೆಗೆ ಹಿಂದಿರುಗಿ ಬಂದು ಮುದಿಕಾಗೆಯೊಂದಿಗೆ, "ತಾತಾ! ತಾತಾ! ದಾಹದಿಂದ ನನ್ನ ಬಾಯಿ ಪೂರಾ ಒಣಗಿತು. ನೀರು ಎಲ್ಲಿ ಸಿಗುತ್ತೆ, ಹೇಳು ತಾತಾ, ಇಲ್ಲಿ ಸುತ್ತಮುತ್ತಲೆಲ್ಲಾ ಹುಡುಕಿ ನೋಡಿದೆ. ಎಲ್ಲಿಯೂ ನೀರು ಕಾಣಲಿಲ್ಲ." ಎಂದಿತು.

ಮುದಿ ಕಾಗೆ ಸ್ವಲ್ಪ ಆಲೋಚನೆಮಾಡಿ ಹೀಗೆಂದಿತು: "ಕೇಳು, ನಾನು ಹೇಳೋದನ್ನು. ಪೂರ್ವದಲ್ಲಿ ನಮ್ಮ ಜಾತಿಯವನೊಬ್ಬನಿಗೆ ನಿನ್ನ ಹಾಗೆಯೇ ಬಹಳ ದಾಹವಾಯಿತಂತೆ. ನೀರಿಗಾಗಿ ಎಲ್ಲೆಲ್ಲೋ ತಿರುಗಿ ತಿರುಗಿ ಕಡೆಗೆ ಒಂದು ಕಡೆ ಒಂದು ಗಡಿಗೆಯ ತಳದಲ್ಲಿ ಸ್ವಲ್ಪ ನೀರು ಇರುವುದನ್ನು ನೋಡಿತು. ಆ ನೀರು ಅದರ ಬಾಯಿಗೆ ಎಟಕುವಂತಿರಲಿಲ್ಲ. ಆಗ ಅದು ತನ್ನ ಕೊಕ್ಕಿನಿಂದ ಒಂದೊಂದು ಹರಳು ಕಲ್ಲನ್ನು ಆ ಗಡಿಗೆಯೊಳಗೆ ಹಾಕಿ ನೀರು ಮೇಲೆ ಬರುವ ಹಾಗೆ ಮಾಡಿ ತನ್ನ ದಾಹ ತೀರಿಸಿಕೊಂಡಿತಂತೆ. ಹಾಗೆಯೇ ನಾವು ಕೂಡಾ ಮಾಡಿ ದಾಹ ತೀರಿಸಿಕೊಳ್ಳೋಣ.

ಪಿ. ಪೂರ್ಣಚಂದ್ರರಾವ್

ನನಗೂ ತುಂಬಾ ದಾಹವಾಗಿದೆ. ಬಾ ಹುಡುಕುತ್ತಾ ಹೋಗೋಣ. ಸುಮ್ಮನೆ ಕುಳಿತರೆ ಏನೂ ಬಾರದು."

ಆಮೇಲೆ ತಾತ ಕಾಗೆಯೂ ಮರಿ ಕಾಗೆಯೂ ನೀರನ್ನು ಹುಡುಕುತ್ತಾ ಹೊರಟುವು. ಅವುಗಳಿಗೆ ಎಲ್ಲಿಯೂ ನೀರು ಕಾಣಲಿಲ್ಲ. ಕಡೆಗೆ ಒಂದು ದೊಡ್ಡ ಗಡಿಗೆಯನ್ನು ನೋಡಿದುವು. ಅದರ ತಳದಲ್ಲಿ ಸ್ವಲ್ಪ ನೀರೇನೋ ಇದ್ದಿತು. ಗಡಿಗೆಯ ಬಾಯಿ ಚಿಕ್ಕದಾದುದರಿಂದ ನೀರು ಅವುಗಳಿಗೆ ಎಟಕಲಿಲ್ಲ. ಅವುಗಳ ಅದೃಷ್ಟಕ್ಕೆ ಸರಿಯಾಗಿ, ಹತ್ತಿರದಲ್ಲಿ ತುಂಬಾ ಹರಳು ಕಲ್ಲುಗಳೂ ಇದ್ದುವು. ಇನ್ನೇನು? ಅವು ಉತ್ಸಾಹದಿಂದ ಕೊಕ್ಕಿನಲ್ಲಿ ಒಂದೊಂದೇ ಕಲ್ಲುಗಳನ್ನು ಹೆಕ್ಕಿ ಆ ಗಡಿಗೆಗೆ ಹಾಕ ತೊಡಗಿದುವು. ಒಂದು ಕಡೆಯಲ್ಲಿ ದಾಹವೂ, ಮತ್ತೊಂದು ಕಡೆಯಲ್ಲಿ ಬಿಸಿಲೂ ಕಾಡುತ್ತಿರಲು, ಬೇಗದಲ್ಲೇ ಅವುಗಳಿಗೆ ನಿತ್ರಾಣ ಬಂತು, ಗಡಿಗೆಯ ಕಾಲುಭಾಗದಷ್ಟೂ ತುಂಬಲಿಲ್ಲ. ಆದರೂ ಅವು ನಿರಾಶೆಗೊಳ್ಳದೆ, ಕಥೆಯ ಕಾಗೆಯನ್ನು ನೆನೆದುಕೊಂಡು, ಮತ್ತೆ ಸ್ವಲ್ಪ ಹೊತ್ತು ಗಡಿಗೆಯೊಳಗೆ ಕಲ್ಲುಗಳನ್ನು ಹಾಕಿಯೇ ಹಾಕಿದುವು. ಗಡಿಗೆಯಲ್ಲಿ ಕಲ್ಲುಗಳು ಮೇಲೇಳುತ್ತಿದ್ದುವು. ನೀರು ಏಳುವುದು ಯಾವಾಗಲೋ ? ಕಡೆಗೆ ಈ ಕೆಲಸ ತಮ್ಮಿಂದ ಆಗುವಂಥಾದ್ದಲ್ಲವೆಂದು ಅವುಗಳಿಗೆ ಗೊತ್ತಾಯಿತು.

"ಏನಿದು ತಾತಾ! ನಮ್ಮ ಜಾತಿಯ ಒಬ್ಬನೇ ಇಂಥಾ ಕೆಲಸ ಸಾಧಿಸಿ ದಾಹ ತೀರಿಸಿಕೊಂಡನೆಂದು ಹೇಳಿದೆಯಲ್ಲಾ? ನಾವಿಬ್ಬರೂ ಕೂಡಿ ಈ ಕೆಲಸ ಸಾಧಿಸಲು ಸಾಧ್ಯವಿಲ್ಲದೆ ಹೋಯಿತೇಕೆ ? ನೀನು ನನಗೆ ಮೋಸಮಾಡಿದೆ ತಾತಾ!" ಎಂದು ಮರಿಕಾಗೆ ನಸುಗೋಪದಿಂದಲೂ ಆಯಾಸದಿಂದಲೂ ಹೇಳಿತು.

"ನಾನೇನು ಕಣ್ಣಾರೆ ನೋಡಿ ಹೇಳಿದೆನೇನೋ ಪೋರ! ನಮ್ಮ ಊರಿನ ಜಗಲೀ ಶಾಲೆಯ ಐಗಳೇ ನನ್ನನ್ನೂ ನಿನ್ನನ್ನೂ ಮೋಸಮಾಡಿದ್ದು! ಅವರು ಪ್ರತಿದಿನಾ ಹುಡುಗರಿಗೆ ಹೊಡೆಯುತ್ತ, ಕುಟ್ಟುತ್ತ ಪದೇ ಪದೇ ಆ ಕಥೆ ಹೇಳುತ್ತಾ ಇದ್ದರೆ ನಾನು ನಿಜವೇ ಅಂದುಕೊಂಡೆನಪ್ಪಾ! ನಾನೂ ಎಷ್ಟು ಕಷ್ಟ ಪಟ್ಟೆನು!" ಎಂದಿತು ಮುದಿಕಾಗೆ.



ಇನ್ನೂ ಎರಡು ಕಾಗೆಗಳನ್ನು ಕರೆದು ಕಲ್ಲು ಹಾಕಿದರೂ ಆ ಗಡಿಗೆ ಹರಳು ಕಲ್ಲುಗಳಿಂದ ತುಂಬಿ ನೀರು ಮೇಲೆ ಬರುವುದರೊಳಗೆ ತಮ್ಮ ಪ್ರಾಣ ಹೋಗುವುದೇ ನಿಶ್ಚಯವೆಂದುಕೊಂಡು ಆ ಕಾಗೆಗಳೆರಡೂ ತಮ್ಮ ನಿವಾಸವಾದ ಆ ನೆರಳೇ ಮರಕ್ಕೇ ಹಿಂದಿರುಗಿದುವು.

ಜಗಲೀಶಾಲೆಯ ಐಗಳು ಆಗಲೇ ಊಟ ಮುಗಿಸಿ ಬಂದು, ಚಾವಡಿಯ ಬದಿಯಲ್ಲಿದ್ದ ಒರಗು ಕುರ್ಚಿಯಲ್ಲಿ ಒರಗಿಕೊಂಡರು. ಮರದಲ್ಲಿದ್ದ ಕಾಗೆಗಳಿಗೆ ಐಗಳು ಮಾತ್ರವಲ್ಲದೆ, ಆಚೆಯ ಬದಿಯಲ್ಲಿ ನೀರಿನಿಂದ ತುಂಬಿದ ಎರಡು ಗಡಿಗೆಗಳು ಸ್ಪಷ್ಟವಾಗಿ ಕಂಡುಬಂದುವು.

ಮುದುಕ ಕಾಗೆ ಅವಸರಪಡಬೇಡವೆಂದು ಎಚ್ಚರಿಸುವುದರೊಳಗೆ ಮರಿಕಾಗೆ "ಕಾಕಾ" ಎನ್ನುತ್ತಾ ಹೋಗಿ ಐಗಳ ಮನೆಯ ಬಾಗಿಲ ಹತ್ತಿರ ಎರಗಿತು. "ಛೂ! ಹಾಳು ಕಾಗೆ! ಮನೇ ಒಳಗೇ ನುಗ್ಗೋ ಹಾಗೆ ಬರುತ್ತೆ!" ಎಂದು ಛೀತ್ಕರಿಸುತ್ತ ಐಗಳ ಹೆಂಡತಿ ಮುಸುರೆ ಪಾತ್ರಗಳನ್ನೆತ್ತಿಕೊಂಡು ಹೊರಗೆ ಒಯ್ದಳು.

ಪುಟ್ಟಕಾಗೆಗೆ ಮಿಂಚಿನಂತಹ ಒಂದು ಆಲೋಚನೆ ಬಂತು. ಅದು ಅವಳ ಹಿಂದೆಯೇ ಹೋಗಿ, ಒಂದು ಚಮಚೆಯನ್ನು ತಟ್ಟನೆ ಕಚ್ಚಿಕೊಂಡು ರಿವ್ವನೆ ಹಾರಿ ಇದಿರು ಮನೆಯ ಮಾಡಿನ ಮೇಲೆ ಎರಗಿತು.

"ಅಯ್ಯೋ! ಚಂಚ ಕಾಗೆ ಎತ್ತಿಕೊಂಡು ಹೋಯ್ತೋ!" ಎಂದು ಕೂಗುತ್ತ ಐಗಳ ಹೆಂಡತಿ ಅತ್ತ ಓಡಿದಳು. ಒರಗು ಕುರ್ಚಿಯಲ್ಲಿ ತೂಕಡಿಸುತ್ತಿದ್ದ ಐಗಳು ಚಟ್ಟನೆ ಎದ್ದು, ಗಡಿಬಿಡಿಯಲ್ಲಿ ಬಟ್ಟೆಯನ್ನು ಸರಿಮಾಡಿಕೊಳ್ಳುತ್ತ ಅವಳ ಹಿಂದೆಯೇ ದಾಪುಗಾಲು ಹಾಕಿ ಓಡಿದರು.

ಸಣ್ಣಕಾಗೆ ಚಮಚೆಯನ್ನು ಮಾಡಿನ ಮೇಲೆಯೇ ಬಿಟ್ಟು, ಮರದ ಮೇಲಿದ್ದ ತಾತ ಕಾಗೆಯನ್ನೂ ಕರೆದುಕೊಂಡು, ಐಗಳ ಮನೆಯೊಳಗೆ ಪ್ರವೇಶಿಸಿತು. ಎರಡು ಕಾಗೆಗಳೂ ಒಂದೊಂದು ಗಡಿಗೆಯ ಮೇಲೆ ಕುಳಿತು ತೃಪ್ತಿಯಾಗಿ ತಣ್ಣಗಿನ ನೀರು ಕುಡಿದು ದಾಹ ಕಳೆದುಕೊಂಡು, ತಲೆಯನ್ನೂ ಮುಳುಗಿಸಿಕೊಂಡುವು.

ಐಗಳು ಪಕ್ಕದ ಮನೆಯವರ ಏಣಿಯನ್ನು ಇಡಿಸಿ, ಮಾಡಿಗೆ ಏರಿ ಚಮಚೆ ತೆಗೆದುಕೊಂಡು ಇಳಿದು ಬರುತ್ತ, ಮನೆಯೊಳಗೆ ಇನ್ನೂ ನೀರು ಕುಡಿಯುವ ಕಾಗೆಗಳನ್ನು ನೋಡಿ ಕೂಗಾಡಿದರು.

ಆ ದಿನದಿಂದ ಅವರು ಹಳೆಯ ಕಥೆಯನ್ನು ಬಿಟ್ಟುಕೊಟ್ಟು ಮಕ್ಕಳಿಗೆ ಈ ಕಥೆಯನ್ನೇ ಹೇಳಲು ತೊಡಗಿದರು.

"ಈಗಿನ ಕಾಗೆಗಳ ಬುದ್ಧಿವಂತಿಕೆ ನಮಗಿಲ್ಲದೆ ಹೋಯಿತಲ್ಲ!" ಎಂದುಕೊಂಡಿತು ಮುದಿ ಕಾಗೆ.



# ಆದರ್ಶ

ಶ್ರೀಪತಿ ಯಾವಾಗಲೂ ಆದರ್ಶವನ್ನು ಕುರಿತೇ ಮಾತಾಡುವನು. ಆದರೆ ಆಚರಣೆಯಲ್ಲಿ ಮಾತ್ರ ಯಾವ ಆದರ್ಶವನ್ನೂ ನೋಡುವವನಲ್ಲ.

ಉದಾಹರಣೆಗೆ ಅವನು ಮಾತು ಮಾತಿಗೂ ವರದಕ್ಷಿಣೆ ತೆಗೆದುಕೊಳ್ಳುವುದು ಮಹಾಪಾಪವೆಂದು ಎಲ್ಲರೊಂದಿಗೂ ಹೇಳುತ್ತ, ತನಗಾಗಿ ಕನ್ಯಾನ್ವೇಷಣೆಯಲ್ಲಿದ್ದ ತಂದೆತಾಯಿಗಳೊಂದಿಗೆ, ಐವತ್ತು ಸಾವಿರ ವರದಕ್ಷಿಣೆ ಕೊಡದ ಸಂಬಂಧವನ್ನು ತನ್ನವರೆಗೆ ತರಬೇಡವೆಂದು ಹೇಳಿದ್ದನು.

ಅವನ ಮಿತ್ರ ರಮೇಶನು ಒಂದು ದಿನ ಅವನೊಂದಿಗೆ, "ವರದಕ್ಷಿಣೆ ತೆಗೆದುಕೊಂಡು ಮದುವೆ ಮಾಡಿಕೊಳ್ಳುವುದು ದ್ರೋಹವೆನ್ನುವೆಯಪ್ಪ ? ನೀನೇಕೆ ಇನ್ನೂ ಮದುವೆಯಾಗಲಿಲ್ಲ ? ವರದಕ್ಷಿಣೆ ಬೇಡವೆಂಬ ವರನಿಗೆ ಸಾವಿರಾರು ಸಂಬಂಧಗಳು ಬರುತ್ತವಪ್ಪ ?" ಎಂದು ಕೇಳಿದನು.

"ಸಂಬಂಧ ಬಾರದೆ ಅಲ್ಲ. ಹುಡುಗಿ ಚೆನ್ನಾಗಿರಬೇಕೆಂಬುದು ನನ್ನ ನಿರ್ಧಾರ. ನಿಜಕ್ಕೂ ಸುಂದರಿಯಾದ ಕನ್ಯೆ ಸಿಕ್ಕಿದರೆ ಖಂಡಿತಾ ಮದುವೆಯಾಗುತ್ತೇನೆ" ಎಂದನು ಶ್ರೀಪತಿ.

ಒಂದು ಸಾರಿ ಮಿತ್ರರಿಬ್ಬರೂ ಸಂತೆಗೆ ಹೋಗಿ, ಹಿಂದಿರುಗುತ್ತ ದಣಿವಾರಿಸಿಕೊಳ್ಳಲಿಕ್ಕಾಗಿ ಒಂದು ಛತ್ರವನ್ನು ಸೇರಿದರು.

ಇದಿರಿನಲ್ಲಿದ್ದ ಜಗಲಿಯಲ್ಲಿ ಹುಡುಗಿಯೊಬ್ಬಳು ಕುಳಿತಿದ್ದಳು. ಅವಳು ತುಂಬಾ ಸುಂದರಿ. ಶ್ರೀಪತಿ ಅವಳನ್ನು ಒಂದೇ ಸಮನೆ ನೋಡುತ್ತಿರುವುದನ್ನು ಗಮನಿಸಿ ರಮೇಶನು, "ಆ ಹುಡುಗಿ ಚೆಂದಾಗಿದ್ದಾಳೆ ಅಲ್ಲವೆ ?" ಎಂದನು ನಿರ್ಲಿಪ್ತನಂತೆ.

"ತುಂಬಾ ಸುಂದರಿಯಾಗಿದ್ದಾಳೆ. ಯಾರೋ ಅವಳು ?" ಎಂದನು ಶ್ರೀಪತಿ.

"ಬೇರೆ ಯಾರೂ ಅಲ್ಲ, ನನ್ನ ತಂಗಿ, ಗಿರಿಜೆ. ನಿನಗೆ ಅವಳು ತುಂಬಾ ಹಿಡಿಸಿದಳು ಅಂತ ಗೊತ್ತಾಯಿತು. ಇನ್ನು ವರದಕ್ಷಿಣೆ ಇಲ್ಲದೆ ನಿನ್ನೊಂದಿಗೆ ಮದುವೆ ಮಾಡುವುದೊಂದೇ ಬಾಕಿ ! ವರದಕ್ಷಿಣೆ ಇಲ್ಲದೆ ಹೇಗೆ ಅವಳ ಮದುವೆ ಯಾಗುತ್ತೋ ಅಂತ ನಾವು ಬಹಳ ಚಿಂತೆಯಲ್ಲಿದ್ದೆವು. ನಿನಗೆ ಹಿಡಿಸಿದ್ದು ನಮ್ಮ ಪುಣ್ಯ ! " ಎಂದನು ರಮೇಶ.

ಶ್ರೀಪತಿ ಗಿರಿಜೆಯನ್ನು ವರದಕ್ಷಿಣೆ ಇಲ್ಲದೆಯೇ, ಮದುವೆಯಾಗಲೇ ಬೇಕಾಯಿತು !





# ಯಾರು ದೊಡ್ಡವರು?

ಅನೇಕ ವರ್ಷಗಳ ಹಿಂದೆ ಅಣ್ಣಾನಗರವೆಂಬಲ್ಲಿ ಚಿದಂಬರರೆಂಬ ದೊಡ್ಡ ಜಮೀನ್ದಾರರಿದ್ದರು. ಪ್ರತಿ ಆದಿತ್ಯವಾರ ಮಧ್ಯಾಹ್ನದ ಮೇಲೆ ಮೂರು ಗಂಟೆಯ ಸಮಯದಲ್ಲಿ ಊರೊಳಗಿನ ಕೆಲ ಮಂದಿ ಪ್ರಮುಖರು ಅವರ ಮನೆಯ ಬಿಡುಚಾವಡಿಯಲ್ಲಿ ಸೇರುವರು. ಅವರ ನಡುವೆ ಏನೋ ಒಂದು ಮಾತು ಶುರುವಾಗಿ ಇಷ್ಟಾಗೋಷ್ಠಿ ನಡೆಯುತ್ತಿತ್ತು,

ಒಂದುಸಾರಿ ಲೋಕಾಭಿರಾಮವಾಗಿ ಇಷ್ಟಾಗೋಷ್ಠಿ ನಡೆಯುವಾಗ ಅಲ್ಲಿ ಸೇರಿದ ದೊಡ್ಡವರನ್ನು ನೋಡಿ ಜಮೀನ್ದಾರರು, "ನಮ್ಮ ಸಮಾಜದಲ್ಲಿ ಧನಿಕರು ಬಡವರು ಎಂಬುದನ್ನು ಬಿಟ್ಟು. ವೈದ್ಯರು, ನ್ಯಾಯಾಧೀಶರು, ರಕ್ಷಕಭಟಾಧಿಕಾರಿಗಳು ಅಂತ ಅನೇಕ ಉದ್ಯೋಗಸ್ಥರಿದ್ದಾರಲ್ಲವೆ? ಇವರಲ್ಲಿ ಯಾರು ದೊಡ್ಡವರು ಅಂತ ನಿರ್ಣಯಮಾಡಲು ಸಾಧ್ಯವೆ?" ಎಂದು ಪ್ರಶ್ನಿಸಿದರು.

"ನಾನು ಹೇಳುತ್ತೇನೆ. ಎಲ್ಲರಿಗೂ ಪ್ರಾಣವೇ ಮುಖ್ಯ. ಶರೀರದ ನೋವುಗಳನ್ನು ಹೋಗಲಾಡಿಸುವ ವೈದ್ಯರೇ ದೊಡ್ಡವರು" ಎಂದು ಗ್ರಾಮಾಧಿಕಾರಿಯಾದ ಲಿಂಗರಾಜನು ಹೇಳಿದನು.

"ಅದೆಲ್ಲಾ ಅವರವರ ಕರ್ಮಾನುಸಾರವಾಗಿ ಬರುವ ರೋಗಗಳು. ಪ್ರಾಣವನ್ನು ಕೊಡಲು ವೈದ್ಯರಿಂದಾಗದು. ಆದರೆ ನ್ಯಾಯ ನಿರ್ಣಯ ಮಾಡುವ ನ್ಯಾಯಾಧೀಶನ ಮೇಲೆ ಧರ್ಮಾಧರ್ಮಗಳು ಆಧಾರವಾಗಿವೆ. ನ್ಯಾಯರೀತಿಯಾಗಿ ವಿಚಾರಣೆ ನಡೆದು ತೀರ್ಪು ಹೇಳಬೇಕಾದರೆ, ಬಂಧುಗಳಿಗಾದರೂ ಸ್ನೇಹಿತರಿಗಾದರೂ ಶಿಕ್ಷೆ ವಿಧಿಸಲೇ ಬೇಕಾಗುತ್ತದೆ. ಆದುದರಿಂದ ನಿಷ್ಪಕ್ಷಪಾತನಾದ ನ್ಯಾಯಾಧಿಕಾರಿಯೇ ದೊಡ್ಡವನು" ಎಂದನು ದೊಡ್ಡ ರೈತನಾದ ನಾಗಪ್ಪಯ್ಯ.

"ಸಮಾಜದಲ್ಲಿ ಹತ್ತಾರು ಮಂದಿಗಳೊಡನೆ ಕೂಡಿಕೊಂಡಿರುತ್ತ, ಮೋಸಗಳಿಂದ, ದೌರ್ಜನ್ಯಗಳಿಂದ, ಕೊಲೆ ಕಳವುಗಳನ್ನು ಮಾಡುವ ಸಮಾಜದ್ರೋಹಿಗಳನ್ನು ಉಪಾಯದಿಂದ ಹಿಡಿದು ಬಿಡುವ ರಕ್ಷಕಭಟಾಧಿಕಾರಿಯೇ ಎಲ್ಲರಿಗಿಂತ ದೊಡ್ಡವನು!" ಎಂದನು ಸಾಹುಕಾರ ಬಂಗಾರಪ್ಪ.

ಸ್ವಲ್ಪ ದೂರದಲ್ಲಿ ನಿಂತು ಇವರೆಲ್ಲರ ಮಾತುಗಳನ್ನು ಕೇಳಿಕೊಂಡಿದ್ದ ಜಮೀನ್ದಾರರ ನೌಕರನಾದ ವೀರಪ್ಪನು, ಹತ್ತಿರ ಬಂದು, ಸ್ವಲ್ಪ ಗಂಟಲು

ಆರ್. ಎಸ್. ನಾರಾಯಣಮೂರ್ತಿ

ಕೆನೆದು ವಿನಯದಿಂದ ಬಾಗಿ, "ಅಯ್ಯಾ, ನೀವು ಹೇಳುವ ಎಲ್ಲರಿಗಿಂತಲೂ ನಮ್ಮೂರಲ್ಲಿ ಮುದುಕರಾದ ರಾಮಯ್ಯ ಮಾಸ್ತರು ದೊಡ್ಡವರು ಅಂತ ನನಗೆ ಕಾಣುತ್ತೆ ಸ್ವಾಮಿ!" ಎಂದನು.

ಎಲ್ಲರೂ ಅವನನ್ನು ನೋಡಿ ಗೇಲಿಮಾಡುವ ಹಾಗೆ ನಕ್ಕರು. ಆಗ ಜಮಿನ್ದಾರರು ಅವನನ್ನು ನೋಡಿ, "ಅದು ಹೇಗೋ ವೀರಾ? ಇಲ್ಲಿರುವ ಹಿರಿಯರೆಲ್ಲ ಅಷ್ಟಷ್ಟು ದೊಡ್ಡವರನ್ನು ಕುರಿತು ಹೇಳುತ್ತಿರುವಾಗ ಯಾರಿಗೂ ಇಲ್ಲದಹಾಗೆ ನಿನಗೆ ಆ ಕೆಲಸಕ್ಕೆ ಬಾರದ ಮುದುಕ ರಾಮಯ್ಯ ಮಾಸ್ತರು ಸಿಕ್ಕಿದರೇನು?" ಎಂದು ಕೇಳಿದರು.

ವೀರಪ್ಪ ಧೈರ್ಯ ತಂದುಕೊಂಡು, "ತಪ್ಪಾದರೆ ಕ್ಷಮಿಸಬೇಕು ಬುದ್ಧೀ. ಇಲ್ಲಿನವರಿಗೆ ಸರಿಸಮನಾಗಿ ವಾದ ಮಾಡೋಣ ಅಂತ ನಾನು ಹೇಳಿದ್ದಲ್ಲ. ಅವರನ್ನೂ ನಿಮಗೆಲ್ಲ ನೆನಪು ಮಾಡುವಾ ಅಂತ ಹೇಳಿದೆ. ಪುಟ್ಟ ದೊರೆಗಳನು ದಿನಾ ಅಲ್ಲಿಗೆ ಕರೆದುಕೊಂಡು ಹೋಗಿ ಬಿಟ್ಟುಬರುತ್ತೇನಷ್ಟೆ? ಆಗ ಸ್ವಲ್ಪಹೊತ್ತು ಅವರು ಮಕ್ಕಳಿಗೆ ಪಾಠ ಹೇಳಿಕೊಡುವುದನ್ನು ಕೇಳುತ್ತಾ ನಿಂತಿರುತ್ತೇನೆ. ಅವರು ಒಬ್ಬೊಬ್ಬ ಹುಡುಗನ ಮನಸ್ಸು ತಿಳಿದು, ಅವರ ಮಿದುಳಿಗೆ ಕೊಡುವ ಮದ್ದಿನಹಾಗೆ ಬೇರೆ ಬೇರೆ ವಿಷಯ ಹೇಳುತ್ತಾರೆ.

"ರಕ್ಷಕಭಟಾಧಿಕಾರಿ ದುಷ್ಟರನ್ನು ಹಿಡಿಯಲು ಪ್ರಯತ್ನಿಸುತ್ತಾನೆ. ಆದರೆ ರಾಮಯ್ಯ ಮಾಸ್ತರು ಮೊದಲೇ ಹುಡುಗರು ಅಡ್ಡದಾರಿ ತುಳಿಯದ ಹಾಗೆ ತರಬೇತು ಮಾಡುತ್ತಾರೆ.

"ನ್ಯಾಯನಿರ್ಣಯದ ಸಮಾಚಾರದಲ್ಲೂ ಹಾಗೇನೇ. ತನ್ನ ಹತ್ತಿರ ಓದಿಕೊಳ್ಳಲು ಬರುವ ಮಕ್ಕಳಲ್ಲಿ ಧನಿಕ ಬಡವ ಎಂಬ ತಾರತಮ್ಯ ಅವರು ನೋಡುವುದಿಲ್ಲ. ಮಕ್ಕಳು ಜಗಳಾಡಿದರೆ, ಆಗಿಂದಾಗಲೇ ಏನು ಸಮಾಚಾರವೆಂದು ವಿಚಾರಿಸಿ ತಪ್ಪು ಮಾಡಿದವನನ್ನು ತಕ್ಕಹಾಗೆ ಶಿಕ್ಷಿಸಿಬಿಡುತ್ತಾರೆ. ಹೀಗೆ ವೈದ್ಯರ ಕೆಲಸ, ರಕ್ಷಕಭಟಾಧಿಕಾರಿ ಕೆಲಸ, ನ್ಯಾಯಾಧಿಕಾರಿಯ ಕೆಲಸಗಳನ್ನು ಅವರೊಬ್ಬರೇ ಮಾಡುವುದು ಮಾತ್ರ ಅಲ್ಲ, ಮುಂದೆ ಅಂತಹ ಉದ್ಯೋಗಗಳಿಗೆ ಅರ್ಹರಾದವರನ್ನು ಕೂಡಾ ತಯಾರಿಸುತ್ತಾರೆ" ಎಂದನು ವೀರಪ್ಪ.

ವೀರಪ್ಪನ ಮಾತಿನಲ್ಲಿದ್ದ ಸತ್ಯವು ಜಮಿನ್ದಾರರನ್ನೂ, ಉಳಿದವರನ್ನೂ ಮೆಚ್ಚಿಸಿ ತಲೆದೂಗಿಸಿತು. ಆ ವರ್ಷ ಯುಗಾದಿ ಹಬ್ಬದದಿನ ಆ ಊರಿನ ಹಿರಿಯರಲ್ಲಿ ಯಾರಿಗೆ ಸನ್ಮಾನಿಸುವುದೆಂದು ಆಲೋಚಿಸುತ್ತಿದ್ದ ಜಮಿನ್ದಾರರಿಗೆ ಸಮಸ್ಯೆ ಬಗೆ ಹರಿಯಿತು. ಅವರು ಹಬ್ಬದದಿನ ರಾಮಯ್ಯ ಮಾಸ್ತರನ್ನು ಘನವಾಗಿ ಸನ್ಮಾನಿಸಿದರು.





# ಇಬ್ಬರು ಮೋಸಗಾತಿಯರು

೩

ತನ್ನ ಗುರುತನ್ನು ಕತ್ತೆಯ ಹುಡುಗನು ತಿಳಿದನೆಂದು ತಿಳಿದರೂ ದಿಲ್ಲೈಲಾ ಸ್ವಲ್ಪ ಕೂಡಾ ಹೆದರಲಿಲ್ಲ. ಅವಳು ಅವನನ್ನು ಪರೀಕ್ಷಿಸುವಂತೆ ನೋಡುತ್ತಾ "ನೀನು ಏನು ಹೇಳುವೆಯಪ್ಪಾ ?" ಎಂದು ಏನೂ ಅರಿಯದವಳಂತೆ ಕೇಳಿದಳು.

"ಮೊದಲು ನನ್ನ ಕತ್ತೆಯನ್ನು ನನಗೆ ಕೊಟ್ಟು ಆಮೇಲೆ ಮಾತಾಡು, ಕಳ್ಳ ಮೋಸದ ಮುದುಕೀ !" ಎಂದನು ಹಲ್ಲು ಕಡಿಯುತ್ತ ಕತ್ತೆಯ ಹುಡುಗ.

"ಏನಾಯಿತಪ್ಪಾ ಹಾಗೆ ಕೂಗಲಿಕ್ಕೆ ? ನಿನ್ನ ಕತ್ತೆಯನ್ನು ನಾನು ಎತ್ತಿಕೊಂಡು ಹೋದೆನೆನ್ನುವಿಯಾ? ಹಜಾಮ ಮಸೂದನಲ್ಲಿ ಭದ್ರವಾಗಿದೆ ನಿನ್ನ ಕತ್ತೆ. ನನ್ನ ಜತೆ ಬಾರಪ್ಪ. ನಿನ್ನ ಕತ್ತೆ ಕೊಡಿಸುತ್ತೇನೆ" ಎಂದಳು ದಿಲ್ಲೈಲಾ.

ಕತ್ತೆಯ ಹುಡುಗ ಅವಳ ಹಿಂದೆಯೇ ಹೋದನು. ಕ್ಷೌರದಂಗಡಿಯ ಮುಂದೆ ಆ ಹುಡುಗನನ್ನು ಸ್ವಲ್ಪ ಇರುವಂತೆ ಹೇಳಿ, ದಿಲ್ಲೈಲಾ ಅಂಗಡಿಯೊಳಗೆ ಹೋಗಿ, ಬಾಡಿದ ಮುಖದಿಂದ ಕಣ್ಣೀರು ತುಂಬಿಕೊಂಡವಳಾಗಿ, ಹಜಾಮ ಮಸೂದನೊಂದಿಗೆ, "ನಿನ್ನ ಹೊರತು ಈ ರೋಗ ಗುಣಪಡಿಸುವವರು ಬೇರೆ ಯಾರೂ ಕಾಣದೆ ಬಂದೆನಪ್ಪಾ !" ಎಂದಳು.

"ಏನು ದೊಡ್ಡಮ್ಮಾ ? ಏನಾಗಬೇಕು ನಿಮಗೆ ?" ಎಂದು ಕೇಳಿದ ಮಸೂದ್.

"ಅಕೋ ನೋಡಪ್ಪಾ, ಹೊರಗೆ ನಿಂತಿದ್ದಾನೆ ನನ್ನ ಮಗ. ಭಾರೀಜ್ವರ ಬಂದು, ಆಚೆಗೋ ಈಚೆಗೋ ಅಂತ ಆಗಿ, ಗುಣವಾಗಿ ಹೋಯಿತು. ಈಗ ಅವನ ಬುದ್ಧಿಗೆ ಏನೋ ಭ್ರಮೆ ಬಡಿದಿದೆ. ಚಿಕ್ಕ ಹುಡುಗನಾಗಿದ್ದಾಗ ಯಾವಾಗಲೂ ಒಂದು ಕತ್ತೆಯ ಜತೆ ಆಡುತ್ತಾ ಇದ್ದ. ಈಗ ಅದನ್ನೇ ಕನವರಿಸಿ ಕೊಂಡಿದ್ದಾನೆ, ಅವನ ತಲೆಯ ಈ ಹುಚ್ಚನ್ನು ನೀನೇ ಬಿಡಿಸಬೇಕಪ್ಪ !" ಎಂದು ದಿಲ್ಲೈಲಾ, ಅವನ ಕೈಗೊಂದು ಬಂಗಾರದ ದಿನಾರಾ ನಾಣ್ಯ ಹಾಕಿದಳು.

ಕೈಗೆಬಿದ್ದ ಬಂಗಾರದ ನಾಣ್ಯ ನೋಡಿದ ಕೂಡಲೇ ಮಸೂದನು, "ಅದಕ್ಕೇನು ಬಿಡೀ ದೊಡ್ಡಮ್ಮಾ ! ತಲೆ ಬೋಳು ಮಾಡಿ, ನಿಂಬೇರಸವನ್ನಿಷ್ಟು ಮರ್ದನ ಮಾಡುತ್ತೇನೆ ನೋಡಿ ! ಮೂರು ಹೊತ್ತಿನೊಳಗೆ ಹುಚ್ಚು ಇಳಿದು ಹೋಗುತ್ತದೆ" ಎಂದನು.



"ಒಳ್ಳೆಯ ಮಾತಿನಿಂದ ಅವನನ್ನು ಕರೆದು ಚಿಕಿತ್ಸೆ ಮಾಡು. ನಿನ್ನ ಋಣ ಇಟ್ಟು ಕೊಳ್ಳಲಾರೆ !" ಎಂದಳು ದಿಲ್ಲೈಲಾ.

ಮಸೂದ್ ಅಂಗಡಿಯ ಹೊರಗೆ ಬಂದು, ಕತ್ತೆಯ ಹುಡುಗನನ್ನು ನೋಡಿ. "ಒಳಗೆ ಬಾರಪ್ಪಾ" ಎಂದು ಕರೆದನು. "ನನ್ನ ಕತ್ತೆ?" ಎಂದು ಹುಡುಗ ಕೇಳಿದ ಕೂಡಲೇ, "ಅದು ನನ್ನ ಹತ್ತಿರವೇ ಇದೆ. ಒಂದು ನಿಮಿಷ ಒಳಗೆಬಾರಪ್ಪ" ಎಂದ ಮಸೂದ್.

ಕತ್ತೆಯಹುಡುಗ ಅಂಗಡಿಯೊಳಗೆ ಪ್ರವೇಶಿಸಿದನು. ಕೂಡಲೇ ಮಸೂದನ ಸನ್ನೆಯಂತೆ ನೌಕರರು ಅವನನ್ನು ಹಿಡಿದು ಕೈಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿದರು. ಮಸೂದ್ ಅವನ ತಲೆಯನ್ನು ನುಣ್ಣಗೆ ಬೋಳಿಸಿದನು. ಆಮೇಲೆ ನಿಂಬೆರಸವನ್ನು ಅವನ ತಲೆಗೆ ಹಚ್ಚಿ ರುದ್ದತೊಡಗಿದನು. ಹುಡುಗನು ಕೂಗಾಡುತ್ತಿದ್ದರೂ ಯಾರೂ ಲಕ್ಷಿಸಲಿಲ್ಲ.

ಒಂದುಸಾರಿಯ ಚಿಕಿತ್ಸೆ ಮುಗಿದ ಮೇಲೆ ಅವನನ್ನು ಹಾಗೆಯೇ ಕೂಡಿಸಿಟ್ಟು. ಒಳಗೆ ಹೋಗಿ ನೋಡಿ ಗಾಬರಿ ಬಿದ್ದನು. ಅಲ್ಲೆಲ್ಲಿಯೂ ಮುದುಕಿಯ ಜಾಡು ಕಾಣಲಿಲ್ಲ. ಅದುಮಾತ್ರವಲ್ಲದೆ, ಕತ್ತಿ, ಕನ್ನಡಿ, ತೈಲಗಳು, ಪರಿಮಳ ದ್ರವ್ಯಗಳು, ಬೆಲೆ ಬಾಳುವ ಅತ್ತರು, ಮೇಜುಕುರ್ಚಿಗಳು ಸಹಾ ಮಾಯವಾಗಿದ್ದುವು.

ಮಸೂದ್ ಕತ್ತೆಯ ಹುಡುಗನ ಬಳಿಗೆ ಬಂದು, ಅವನ ಕುತ್ತಿಗೆ ಹಿಡಿದು, "ಸೈತಾನ್ ಬಚ್ಚಾ! ಎಲ್ಲಿಯೋ ನಿನ್ನಮ್ಮ ಸೈತಾನ್?" ಎಂದು ಕೇಳಿದ.

"ಎಂದೋ ಸತ್ತು ಪರಲೋಕ ಸೇರಿದ ನನ್ನ ಅಮ್ಮ ಯಾಕೆ ಸೈತಾನ್ ಆದಾಳು? ನನ್ನಕತ್ತೆ ಇದೆ ಅಂದೆ ಯಲ್ಲಾ? ಅದೆಲ್ಲಿದೆ? ಕೊಟ್ಟುನನ್ನನ್ನು ಬಿಟ್ಟುಬಿಡು!" ಎಂದ ಕತ್ತೆಯ ಹುಡುಗ ತಲೆ ಸವರಿಕೊಳ್ಳುತ್ತ.

ಆಗ ಉಳಿದ ನಾಲ್ವರು ಕೂಡಾ ಮೊದಲೇ ಅಂದುಕೊಂಡ ಪ್ರಕಾರ ಹಜಾಮ ಮಸೂದನ ಅಂಗಡಿಗೆ ಬಂದರು. ನಡೆದ ಸಂಗತಿ ಪೂರಾ ತಿಳಿದ ಮೇಲೆ ಆ ಕಳ್ಳ ಮುದಕಿಯೇ ಮತ್ತೊಂದು ಮೋಸ ಮಾಡಿದ್ದಾಳೆಂದು ಗೊತ್ತಾಯಿತು. ಹಜಾಮ ಮಸೂದನೂ ಅವರೊಂದಿಗೆ ಸೇರಿದನು. ಅವಳನ್ನು ಹುಡುಕಲು ಅವರೆಲ್ಲಾ ಮತ್ತೆ ಹೊರಟರು.

ಅವರು ಅನೇಕ ಬೀದಿಗಳನ್ನು ತಿರುಗಿ ಒಂದು ಕಡೆಗೆ ಬಂದಾಗ, ಕತ್ತೆಯ ಹುಡುಗನಿಗೆ ದಿಲ್ಲೈಲಾ ಮತ್ತೆ ಕಣ್ಣಿಗೆಬಿದ್ದಳು. ಅವನು ಓಡಿ ಹೋಗಿ ಒಮ್ಮೆಗೇ ಅವಳ ಮೇಲೆಬಿದ್ದು ಗಟ್ಟಿಯಾಗಿ ಹಿಡಿದು ಕೊಂಡು, "ಇವಳೇ! ಮುದಿಪಿಶಾಚಿ! ಇನ್ನು ಬಿಡಬಾರದು. ಹಿಡೀರಿ!" ಎಂದು ಕೂಗಿದನು.

ಎಲ್ಲರೂ ಕೂಡಿ ಅವಳನ್ನು ಹಿಡಿದುಕೊಂಡು ಖಾಲೀದನ ಮನೆಗೆ ತೆಗೆದುಕೊಂಡು ಹೋಗಿ, ಅಲ್ಲಿದ್ದ ಭಟರೊಂದಿಗೆ, "ನಮಗೆ ಬೇಗನೇ ಖಾಲೀದ್ ದೊರೆಗಳ ದರ್ಶನವಾಗಬೇಕು." ಎಂದರು. "ಹೀಗೆ ಅವಸರ ಮಾಡಿದರೆ ತಲೆ ಹೋದೀತು.



ಅವರು ನಿದ್ದೆಯಲ್ಲಿದ್ದಾರೆ. ಏಳುವವರೆಗೆ ಕಾಯಬೇಕು" ಎಂದು ಸೇವಕರು, ಐದುಮಂದಿ ಗಂಡುಸರನ್ನೂ ಹೊರಗಿನ ಅಂಗಳದಲ್ಲಿ ಕುಳ್ಳಿರಿಸಿ, ದಿಲ್ಲೈಲಾಳನ್ನು ಜನಾನಾ ಭಾಗದ ಒಂದು ಕೋಣೆಯೊಳಗೆ ಕಳುಹಿಸಿದರು.

ದಿಲ್ಲೈಲಾ ಆ ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗಿ, ಹಾಗೆಯೇ ಮತ್ತೆ ಕೆಲವು ಕೋಣೆಗಳನ್ನು ದಾಟಿ, ಮಾಳಿಗೆಯ ಮೇಲೆ ಖಾಲೀದನ ಹೆಂಡತಿ ಇರುವ ಸ್ಥಳಕ್ಕೆ ಹೋದಳು. ಅವಳಿಗೆ ಬಗ್ಗಿ ಸಲಾಂ ಮಾಡಿ, "ಅಮ್ಮ, ನಮ್ಮ ಹತ್ತಿರವಿರುವ ಗುಲಾಮರನ್ನು ನಿಮ್ಮ ಯಜಮಾನರು ಹನ್ನೆರಡು ನೂರು ದೀನಾರಗಳಿಗೆ ಕೊಂಡುಕೊಳ್ಳುವುದಾಗಿ ಮಾತಾಗಿದೆ. ಗುಲಾಮರನ್ನು ಒಪ್ಪಿಸಿಬಿಡೋಣವೆಂದು ಕರಕೊಂಡು ಬಂದೆ. ಯಜಮಾನರು ನಿದ್ದೆಯಿಂದೇಳುವಾಗ ಎಷ್ಟು ಹೊತ್ತಾಗುತ್ತೋ?" ಎಂದಳು.

ಖಾಲೀದನ ಹೆಂಡತಿ, "ಆ ಸಮಾಚಾರ ನಾನು ಹೇಗೆ ಹೇಳಲಿ? ಕೆಲವು ಸಲ ಬೇಗ ಏಳುತ್ತಾರೆ. ಕೆಲವು ಸಲ ತಡವಾಗಿ ಏಳುತ್ತಾರೆ. ಅವರು ಗುಲಾಮರನ್ನು ಕೊಂಡುಕೊಳ್ಳುವ ಸಂಗತಿ ನನ್ನಲ್ಲಿ ಹೇಳಲಿಲ್ಲವಲ್ಲಾ? ಎಲ್ಲಿದ್ದಾರೆ ಆ ಗುಲಾಮರು?" ಎಂದು ಕೇಳಿದಳು.

"ಕೆಳಗೆ ಅಂಗಳದಲ್ಲಿದ್ದಾರೆ. ನಿಮ್ಮ ಭಟರ ಹತ್ತಿರಹೇಳಿ ಕೂಡಿಸಿದ್ದೇನೆ, ಕಿಟಕೀಲಿ ನೋಡಿದರೆ ನಿಮಗೆ ಕಾಣುತ್ತಾರೆ. ಎಲ್ಲರೂ ಒಳ್ಳೇಗಟ್ಟಿ ಮುಟ್ಟಾದವರೇ" ಎಂದಳು ದಿಲ್ಲೈಲಾ.

ಖಾಲೀದನ ಹೆಂಡತಿ ಅಂಗಳದಲ್ಲಿರುವವರನ್ನು ಕಿಟಕಿಯಿಂದ ನೋಡಿ ತೃಪ್ತಿಪಟ್ಟಳು. ಕತ್ತಲಾಗುವುದರೊಳಗೆ ತನ್ನ ಮನೆ ಸೇರಬೇಕಲ್ಲಾ ಎಂದು ದಿಲ್ಲೈಲಾ ಗುಣುಗುಣಿಸುವಾಗ, ಖಾಲೀದನ ಹೆಂಡತಿ, "ಹಣ ನಾನೇ ಕೊಡುತ್ತಿದ್ದೆ. ಆದರೆ ನನ್ನ ಹತ್ತಿರ ಸಾವಿರ ದೀನಾರ ಮಾತ್ರವೇ ಇದೆ. ಏನು ಮಾಡಲಿ?" ಎಂದಳು ವಿಚಾರದಿಂದ.

"ಸಾವಿರವೇ ಸರಿಯಾಯಿತಲ್ಲ ಅಮ್ಮಾ? ಇನ್ನೂರನ್ನು ಮುಂದಾಗಿ ತೆಗೆದುಕೊಂಡಿದ್ದೇನಲ್ಲ?" ಎಂದಳು ದಿಲ್ಲೈಲಾ. ಖಾಲೀದನ ಹೆಂಡತಿ ಸಾವಿರ ದೀನಾರಗಳನ್ನು ದಿಲ್ಲೈಲಾಳಿಗೆ ಕೊಟ್ಟಳು. "ಈ ಮುದುಕೀನ ದಣಿಸದೆ ನನ್ನ ಕೆಲಸ ಮುಗಿಸಿ ಬಹಳ ಪುಣ್ಯಕಟ್ಟಿಕೊಂಡೆಯಮ್ಮ. ನನಗೆ ಆ ಗುಲಾಮರ ಮುಖ ನೋಡಲಿಕ್ಕೆ ಬಹಳ ಸಂಕಟವಾಗುತ್ತದೆ. ನನ್ನನ್ನು ನೋಡಿ ಅವರೆಲ್ಲ ಅತ್ತರೆ, ನಾನೂ ದುಃಖಪಡಬೇಕಾಗುತ್ತದೆ. ಆದ್ದರಿಂದ ನನ್ನನ್ನು ದಯಮಾಡಿ ಹಿಂದಿನ ಬಾಗಿಲಲ್ಲಿ ಕಳಿಸಿಬಿಡಮ್ಮ. ನಿಮ್ಮ ವ್ಯಾಪಾರ ಮುಗಿಯಿತೆಂದು ಅವರಿಗೂ ಹೇಳಿದ್ದೇನೆ" ಎಂದಳು ದಿಲ್ಲೈಲಾ. ಹಾಗೆಯೇ ಅವಳು ಆ ಭವನದಿಂದ ಹೊರಬಿದ್ದುದೂ ಆಯಿತು.

ಸ್ವಲ್ಪ ಹೊತ್ತಾದ ಮೇಲೆ ಖಾಲಿದ್ ನಿದ್ದೆಯಿಂದ ಎದ್ದನು. ಆಗ ಅವನ ಹೆಂಡತಿ, "ಒಟ್ಟಿನ ಮೇಲೆ



ನನ್ನನ್ನು ಆಶ್ಚರ್ಯಪಡಿಸಬೇಕಂತ ಇದ್ದಿರೇನು ? ನನಗೆ ಹೇಳದೆಯೇ ಒಳ್ಳೆಯ ವ್ಯಾಪಾರ ಮಾಡಿದ್ದೀರಿ !" ಎಂದು ಗುಲಾಮರ ಸಮಾಚಾರವನ್ನು ಹೇಳಿದಳು.

ಖಾಲೀದ್ ವಿಸ್ಮಿತನಾಗಿ, "ಏನಂದೆ ? ಗುಲಾಮರೆ ? ಹಾಗೆ ನಾನು ಯಾರಿಗೂ ಮುಂಗಡ ಕೊಡಲಿಲ್ಲವಲ್ಲ ?" ಎಂದನು.

"ಹೀಗೂ ಮರೆವೇ ? ನಾನು ಆ ಮುದುಕಿಗೆ ಸಾವಿರ ದೀನಾರ ಕೊಟ್ಟೆನು. ಅವಳು ಬಿಟ್ಟು ಹೋದ ಗುಲಾಮರು ಕೆಳಗೇ ಇದ್ದಾರೆ. ನೋಡಿರಿ !" ಎಂದುಳು ಹೆಂಡತಿ.

ಖಾಲೀದ್ ಬೇಗ ಬೇಗನೆ ಕೆಳಗೆ ಹೋಗಿ, ಅವನನ್ನೇ ಕಾದುಕೊಂಡಿದ್ದ ಅಂಗಡಿಗಾರನನ್ನೂ, ರಂಗಾರಿಯನ್ನೂ, ರತ್ನ ವ್ಯಾಪಾರಿಯನ್ನೂ, ಹಜಾಮ ಮಸೂದನನ್ನೂ, ಕತ್ತೆಯ ಹುಡುಗನನ್ನೂ ನೋಡಿ ಅತ್ಯಾಶರ್ಯ ಪಟ್ಟನು.

"ನಾನು ಕೊಂಡುಕೊಂಡ ಗುಲಾಮರೋ ನೀವು?" ಎಂದು ಅವನು ಅವರನ್ನು ನೋಡಿ ಕೇಳಿದನು.

"ನಾವು ಗುಲಾಮರೇ ? ನಡೆಯಿರಿ ಖಲೀಫರ ಬಳಿಗೆ! ಅವರನ್ನೇ ಕೇಳೋಣ" ಎಂದರು ಆ ಐವರೂ.

ಆ ಹೊತ್ತಿಗೆ ಮುಸ್ತಫಾ ಸಹ ಅಲ್ಲಿಗೆ ಬಂದನು. ತನ್ನ ಹೆಂಡತಿಗೆ ಮುದುಕಿಯೊಬ್ಬಳು ಮಾಡಿದ ಮೋಸವನ್ನು ಕುರಿತು ಅವನಿಗೆ ಗೊತ್ತಾಗಿತ್ತು. ಅವನು ಖಾಲೀದನೊಂದಿಗೆ, "ನಿಮ್ಮ ನಿರ್ವಹಣೆ ಚೆಂದ ಚೆನ್ನಾಗಿದೆ ! ಪ್ರತಿಯೊಂದು ಮುದಿ ಹೆಣವೂ ತನ್ನಿಷ್ಟ ಬಂದ ಹಾಗೆ ಯಾರು ಯಾರ ಮನೆಗೋ ನುಗ್ಗಿ ಪಾಪದ ಹೆಣ್ಣುಗಳನ್ನು ಮೋಸಪಡಿಸುವ ಹಾಗಾಯಿತು ! ಈಗ ನನ್ನ ಹೆಂಡತಿಗೆ ನಡೆದ ಅನ್ಯಾಯಕ್ಕೆ ಏನು ಹೇಳುವಿರಿ ? ಇದೆಲ್ಲಾ ನಿಮ್ಮ ಜವಾಬ್ದಾರಿ ತಾನೆ ?" ಎಂದನು.

ಖಾಲಿದ್ ಗಾಬರಿಯಾಗಿ, "ಅಯ್ಯಾ, ಕೋಪಿಸ ಬೇಡಿ. ಈ ಮುದುಕಿಯನ್ನು ಹಿಡಿದು ಶಿಕ್ಷಿಸುವ ಭಾರ ನನ್ನದೇ. ನಿಮ್ಮೆಲ್ಲರಿಗೂ ಅವಳಿಂದಾದ ನಷ್ಟ ನಾನೇ ಕೊಡುತ್ತೇನೆ" ಎಂದನು.

ಆಮೇಲೆ ಅವನು ಉಳಿದ ಐವರ ಕಡೆಗೂ ತಿರುಗಿ "ನಿಮ್ಮಲ್ಲಿ ಆ ಮುದುಕಿಯನ್ನು ಗುರುತಿಸುವವರು ಯಾರಿದ್ದೀರಿ ? ಎಂದು ಕೇಳಿದನು. ಐವರೂ ಗುರುತಿಸಬಲ್ಲೆವೆಂದರು. "ನೀವು ನಮ್ಮೊಂದಿಗೆ ಹತ್ತು ಮಂದಿ ಭಟರನ್ನು ಕಳುಹಿಸಿ ಕೊಟ್ಟರೆ ಅವಳನ್ನು ಹಿಡಿದು ತರಲೂ ನಮ್ಮಿಂದಾದೀತು !" ಎಂದರು ಐವರೂ ಸಹ.

"ಹಾಗಾದರೆ ಇನ್ನೇನು ?" ಎಂದು ಖಾಲೀದ್ ಹತ್ತು ಮಂದಿ ಭಟರನ್ನು ಅವರೊಂದಿಗೆ ಕಳುಹಿಸಿದನು. ಅವರು ಭಟರನ್ನು ಕರೆದುಕೊಂಡು ಸ್ವಲ್ಪ ದೂರ ಹೋದರೋ ಇಲ್ಲವೋ, ದಿಲೈಲಾ ಅವರ ಇದಿರಿಗೇ ಬರುತ್ತ, ತಪ್ಪಿಸಿಕೊಳ್ಳಲು ತಿರುಗಿದಳು. ಅಷ್ಟರಲ್ಲಿ ಅವರೆಲ್ಲ ಭರದಿಂದ ಹೋಗಿ ಅವಳನ್ನು ಹಿಡಿದು, ಕೈಗಳನ್ನು ಹಿಂದಕ್ಕೆ ಬಿಗಿದು ಕಟ್ಟಿ

ಖಾಲೀದನ ಬಳಿಗೆ ಎಳೆದುಕೊಂಡು ಹೋದರು. ಖಾಲೀದ್ ದಿಲ್ಲೈಲಾಳನ್ನು ಕಳ್ಳತನದ ವಿಷಯವನ್ನು ಕುರಿತು ಪ್ರಶ್ನಿಸಲು, "ನೀವು ಹೇಳುವುದು ನನಗೊಂದೂ ಅರ್ಥವಾಗುವುದಿಲ್ಲ. ನಾನು ನನ್ನ ಜನ್ಮದಲ್ಲಿ ಕಳ್ಳತನ ಮಾಡಿದ್ದೇ ಇಲ್ಲ. ಸಾಯಲಿಕ್ಕೆ ಬಿದ್ದ ನನ್ನಂಥ ಮುದುಕಿಗೆ ಕಳ್ಳತನವೇಕೆ!" ಎಂದಳು.

ಆ ಸಮಯಕ್ಕೆ ಹೊತ್ತು ಮುಳುಗಿದುದರಿಂದ, ಹೆಚ್ಚು ವಿಚಾರಿಸಲು ಸಮಯವಿರಲಿಲ್ಲ. ಅವಳು ಮಾಡಿದಂತಹ ದುರನ್ಯಾಯಗಳು ತುಂಬಾ ಇವೆ. ವಿಚಾರಿಸಬೇಕಾದ ಸಾಕ್ಷಿಗಳು ಅನೇಕರಿದ್ದಾರೆ. ಆದುದರಿಂದ ಆ ರಾತ್ರಿ ಅವಳನ್ನು ಖೈದಿನಲ್ಲಿಟ್ಟು ಬೆಳಗಾದ ಮೇಲೆ ವಿಚಾರಿಸುವುದು ಚೆನ್ನಾಗಿರುತ್ತೆ. ಇಡೀ ರಾತ್ರಿ ಕತ್ತಲೆ ಕೋಣೆಯಲ್ಲಿದ್ದರೆ ಸ್ವಲ್ಪ ಮೆತ್ತಗಾದಾಳು. ಹೀಗೆಂದುಕೊಂಡು ಖಾಲೀದ್ ಜೈಲಿನ ಅಧಿಕಾರಿಯ ಹತ್ತಿರ ಅವಳ ಬಾಧ್ಯತೆ ಒಪ್ಪಿಸಲು ನೋಡಿದನು. ಆದರೆ ಜೈಲಿನ ಅಧಿಕಾರಿ, "ಇಷ್ಟು ದೊಡ್ಡ ಕಳ್ಳಿ ಏನೋ ಉಪಾಯಮಾಡಿ ತಪ್ಪಿಸಿಕೊಂಡರೆ ನನ್ನ ತಲೆ ಉಳಿಯಲಾರದು" ಎಂದನು.

"ಅದು ನಿಜವೇ. ಹಾಗಾದರೆ ವಿಚಾರಣೆ ನಡೆಯುವ ವರೆಗೆ ಆ ಮುದುಕಿಯನ್ನು ನಾಲ್ಕು ಮಂದಿಗಳ ಕಾವಲಿನಲ್ಲಿರಿಸುವುದೇ ಒಳ್ಳೆಯದು." ಎಂದನು ಖಾಲೀದ್. ಅವನು ಕುದುರೆಯನ್ನು ಹತ್ತಿ. "ನನ್ನ ಹಿಂದೆ ಬನ್ನಿರಿ" ಎಂದು ಹೇಳಿ ಮುಂದೆ ಹೋದನು. ಐವರು ಫಿರ್ಯಾದಿಗಳೂ ದಿಲ್ಲೈಲಾಳನ್ನು ಎಳೆದುಕೊಂಡು ಹೋದರು. ಅಲ್ಲಿ ಬಯಲು ಪ್ರದೇಶದಲ್ಲಿ ಅವಳನ್ನು ಒಂದು ಕಂಬಕ್ಕೆ ಕಟ್ಟಿ ಹಾಕಿಸಿ, ಮುಖ್ಯ ಫಿರ್ಯಾದಿಗಳನ್ನು ನೋಡಿ, "ನೀವೇ ನೋಡಿಕೊಳ್ಳುವಿರಾ ? ಭಟರೂ ಬೇಕೆ ?" ಎಂದು ಕೇಳಿದನು ಖಾಲೀದ್.

"ಇವಳಿಗೆ ಶಿಕ್ಷೆಯಾಗದೆ ನಮಗೆ ನಿದ್ದೆ ಬಾರದು. ನಾವೇ ನೋಡಿಕೊಳ್ಳುತ್ತೇವೆ" ಎಂದರು ಐವರೂ.

ಸರಿಯೆಂದು ಖಾಲೀದ್ ನಗರದೊಳಗೆ ಹೋದನು. ಐವರೂ ದಿಲ್ಲೈಲಾಳ ಸುತ್ತಲೂ ಕುಳಿತು ಅವಳನ್ನು ಬಗೆ ಬಗೆಯಾಗಿ ಬಯ್ಯುತ್ತ, ತಮ್ಮ ಊಟ ಮುಗಿಸಿಕೊಂಡರು. ಹೊತ್ತು ಹೋದಂತೆ ಒಬ್ಬೊಬ್ಬರಿಗೂ ತೂಕಡಿಕೆ ಶುರುವಾಗಿ, ನಿದ್ದೆ ಬಂದಿತು. ಅವರಿಗೆ ಮೂರು ರಾತ್ರಿ ಸರಿಯಾಗಿ ನಿದ್ದೆ ಬಂದಿರಲಿಲ್ಲ.

ನಡು ರಾತ್ರಿ ಕಳೆದ ಮೇಲೆ ಆ ಪ್ರಾಂತಕ್ಕೆ ಮತ್ತಿಬ್ಬರು ಬಂದು ಕೂಡಿದರು, ಒಬ್ಬನು ಹೊಸತಾಗಿ ಆ ನಗರಕ್ಕೆ ಬಂದವನು. ಎರಡನೆಯವನು ಆ ನಗರವನ್ನು ಬಿಟ್ಟು ಎಲ್ಲಿಗೋ ಹೋಗುವವನು, ಇಬ್ಬರೂ ಅಲ್ಲಿ ನಿಂತು ಮಾತಿಗೆ ತೊಡಗಿದರು. ಅವರ ಮಾತು ತುಸು ದೂರದಲ್ಲಿರುವ ದಿಲ್ಲೈಲಾಳಿಗೆ ಕೇಳಿಸುತ್ತಲೇ ಇತ್ತು.






ಪ್ರಪಂಚಕ್ಕೆ ತಾರಕಾಸುರನ ಭಯ ಹೆಚ್ಚಾಗುತ್ತ ಬರುತ್ತಿತ್ತು. ಅದರ ಜತೆಗೆ ಮತ್ತೊಂದು ಭಯವೂ ಎದ್ದಿತು. ತ್ರಿಪುರಾಸುರರೆಂಬ ಮೂವರು ರಾಕ್ಷಸರು ದೊಡ್ಡ ತಪಸ್ಸು ಮಾಡಿ, ಅಮೋಘವಾದ ವರಗಳನ್ನು ಪಡೆದು ಆಕಾಶದಲ್ಲಿ ಹಾರುತ್ತಾ, ತಿರುಗುವ ಮೂರು ನಗರಗಳನ್ನು ನಿರ್ಮಿಸಿಕೊಂಡು, ಯಾವಾಗೆಂದರಾವಾಗ ಮೂರು ಲೋಕಗಳಲ್ಲಿ ಎಲ್ಲಿಯೋ ಒಂದು ಕಡೆ ಮುಗಿಬೀಳತೊಡಗಿದರು. ಒಂದೇಸಾರಿ ಮೂರು ನಗರಗಳು ಆಕಾಶದಲ್ಲಿ ತಿರುಗುತ್ತ, ಅಗ್ನಿಗೋಲಗಳನ್ನು ಸುರಿಸುತ್ತ, ಹಸಿರು ಮುರಿಯುವ ಹಳ್ಳಿಗಳನ್ನು ಧ್ವಂಸ ಮಾಡುತ್ತ ಆ ತ್ರಿಪುರಾಸುರರು ಎಲ್ಲೆಲ್ಲಿಯೂ ಭಯಭೀತಿ ಹುಟ್ಟಿಸುತ್ತಿದ್ದರು. ಅವರನ್ನು ಅಂತ್ಯಗೊಳಿಸ ಬೇಕಾದರೆ ರುದ್ರನೇ ಆಗಬೇಕಿತ್ತು.

ಆಗ ದೇವತೆಗಳೆಲ್ಲರೂ ಕೂಡಿ ಬಂದು ಕೈಲಾಸದ ಶಿವ ಮಂದಿರದ ಮುಂದಿನ ಪ್ರಾಂಗಣದಲ್ಲಿ ಕೂಡಿ ಶಿವನನ್ನು ನಾನಾ ವಿಧವಾಗಿ ಪ್ರಾರ್ಥಿಸುತ್ತ ಕೂಗಿ ಕರೆಯತೊಡಗಿದರು. ಹೊಸದಾಗಿ ಮದುವೆಯಾಗಿ ಆನಂದದಲ್ಲಿದ್ದ, ಶಿವನು ಇದೇನೋ ಆತಂಕ ಬಂದಿತೆಂದುಕೊಂಡು ಆರ್ತರ ಮೊರೆಯನ್ನು ಕೇಳಲು ಧಾವಿಸಿ ಬಂದನು. ತ್ರಿಪುರಾಸುರರ ಮಾರಣ ಕಾರ್ಯಗಳನ್ನು ಕೇಳಿದ ಮೇಲೆ, ಸುಮ್ಮನಿರಲಾಗದೆ ಶಿವನಿಗೆ ಪ್ರಚಂಡೋದ್ವೇಗವೆದ್ದಿತು. ಕೂಡಲೇ ಮೂಲೆಯಲ್ಲಿದ್ದ ತ್ರಿಶೂಲದ ಧೂಳನ್ನು ಒರೆಸಿ, ಪ್ರಮಥ ಗಣಗಳನ್ನು ಕೂಡಿಸಿಕೊಂಡು ತ್ರಿಪುರಾಸುರರ ಸಂಹಾರಕ್ಕಾಗಿ ಹೊರಟನು.

ಅದೇ ಸಮಯದಲ್ಲಿ ಗಜಾಸುರನೆಂಬ ಇನ್ನೊಬ್ಬ ರಾಕ್ಷಸನು, ಜಡೆಯಾನೆಯ ರೂಪದಿಂದ ಲೋಕವನ್ನು ಬೀಭತ್ಸ ಮಾಡುತ್ತ ಹೊರಟಿದ್ದನು. ಆನೆಯ ರೂಪದವನಾದುದರಿಂದಲೇ ಅವನಿಗೆ ಗಜಾಸುರನೆಂಬ ಹೆಸರು ಬಂದಿತ್ತು. ಅವನು ಬಹು ದೊಡ್ಡ ಶಿವಭಕ್ತನಾದುದರಿಂದ, ಶಿವನ ಹೊರತು ಬೇರೆ ವಿಧದಲ್ಲಿ ಸಾವಿಲ್ಲದಂತೆ ವರ ಪಡೆದಿದ್ದನು. ಅಂಥವನನ್ನು ನಾರದನು ನೋಡಿ ಮಾತಾಡಿಸಿ

೪. ಪುತ್ರ ಗಣಪತಿ



ಹೊಗಳುತ್ತ, "ಮಹಾ ಶಿವಭಕ್ತನಾದ ನಿನ್ನ ಹೃದಯ ದಲ್ಲಿಯೇ ಶಿವನನ್ನು ಇರಿಸಿಕೊಳ್ಳುವುದು ಒಳ್ಳೆಯ ದಲ್ಲವೇನು ? ಹಾಗೆ ಮಾಡಿದರೆ ನಿನ್ನ ಶರೀರವೂ ವಜ್ರ ಶರೀರವಾಗುವುದಷ್ಟೆ ?" ಎಂದು ಅವನಿಗೆ ಒಳಿತನ್ನು ಬಯಸುವವನ ಹಾಗೆ ಹೇಳಿದನು. ಗಜಾ ಸುರನು ಕೂಡಲೇ ಉಗ್ರವಾದ ಆರಾಧನೆಗೆ ತೊಡಗಿ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿದನು. ಆಗ ತ್ರಿಪುರಾಸುರ ಸಂಹಾರಕ್ಕಾಗಿ ಅವಸರದಿಂದ ಹೊರಟಿದ್ದ ಶಿವನು, ಗಜಾಸುರನ ತಪಸ್ಸಿಗೆ ಮೆಚ್ಚಿ ಗಜಾಸುರನ ಕೋರಿಕೆಯಂತೆ, ಅವನ ಹೃದಯದಲ್ಲಿ ತನ್ನ ಲಿಂಗ ರೂಪವನ್ನಿರಿಸಿ ಹೋದನು.

"ಹೀಗೆ ಶಿವನು ಗಜಾಸುರನ ಎದೆಯೊಳಗಿದ್ದರೆ ತ್ರಿಪುರಾಸುರನ ಸಂಹಾರವಾದರೂ, ನವ ವಧುವಾದ ಪಾರ್ವತಿಯ ಇಚ್ಛೆಗಳು ಹೇಗೆ ತೀರಿಯಾವು ? ಶಿವ ಪಾರ್ವತಿಯರ ಕುಮಾರನು ಹುಟ್ಟಿ ತಾರಕಾಸುರನ ಸಂಹಾರವಾಗುವ ಬಗೆ ಹೇಗೆ ?" ಎಂದು ದೇವತೆ ಗಳಿಗೆ ದಿಗಿಲು ಹಿಡಿಯಿತು. ದಿಗಿಲುಗೊಂಡ ದೇವತೆ ಗಳನ್ನು ನೋಡಿ ನಾರದನು, "ಚಿಂತಿಸುವಿರೇಕೆ ? ಶಿವನು ಬೃಹದ್ಗುಣ ಲಿಂಗದವನೆಂಬುದನ್ನು ಮರೆತಿರಾ ?" ಎಂದು ಉಪಾಯವನ್ನು ಸೂಚಿ ಸಿದನು. ಕೂಡಲೇ ದೇವತೆಗಳೆಲ್ಲಾ ಗಜಾಸುರನ ಮುಂದೆ ಹೋಗಿ ಶಿವನ ಸ್ತೋತ್ರ ಪಾಠಗಳನ್ನು ಪ್ರಾರಂಭಿಸಿದರು. ಅವರು ತನ್ನನ್ನೇ ಹೊಗಳುವಂತೆ ಅನಿಸಿ ಗಜಾಸುರನೂ ಪರವಶನಾದನು.

ಬರಬರುತ್ತ ಗಜಾಸುರನಿಗೆ ನೋವಿನ ಅನುಭವ ವಾಗತೊಡಗಿತು. ಅವನ ಎದೆಯಲ್ಲಿದ್ದ ಶಿವಲಿಂಗವು ಉಬ್ಬಿ ದೊಡ್ಡದಾಗುತ್ತ ಗಜಾಸುರನನ್ನು ಸೀಳಿ ಹಾಕಿತು. ಗಜಾಸುರನು ಪ್ರಾಣ ಬಿಡುತ್ತ, "ಹೇ ಶಿವಾ ! ನಿನ್ನನ್ನು ನಂಬಿದರೆ ಹೀಗೆ ಮಾಡಿದೆಯಲ್ಲಾ. ಏನಿದು ?" ಎಂದು ಶಿವನನ್ನು ನಿಂದಿಸಿದನು. ಅವನ ಆರ್ತನಾದವನ್ನು ಕೇಳಿ ಶಿವನು ರಣಕೇಳಿಯಿಂದ ಹಿಂದಿರುಗಿ ಬಂದು, "ಗಜಾ ! ಚಿಂತಿಸಬೇಡ. ಶಿವ ಭಕ್ತಿಗೆ ಆದರ್ಶವಾಗಿ ನಿನ್ನ ಹೆಸರು ಚಿರಂಜೀವಿ ಯಾಗಿರುವಂತೆ, ನಿನ್ನ ತಲೆ ನನ್ನ ಸನ್ನಿಹಿತವಾಗಿರು ತ್ತದೆ. ನಿನ್ನ ಚರ್ಮವನ್ನೇ ನಾನು ಧರಿಸಿಕೊಳ್ಳು ತ್ತೇನೆ" ಎಂದು ಅವನಿಗೆ ಕೈವಲ್ಯವನ್ನು ಪ್ರಸಾದಿಸಿ ಮತ್ತೆ ಯುದ್ಧಕ್ಕೆ ಹೋದನು.

ಶಿವನು ಭೂಮಿಯನ್ನು ರಥವನ್ನಾಗಿಸಿ, ಸೂರ್ಯ ಚಂದ್ರರನ್ನು ರಥದ ಚಕ್ರಗಳನ್ನಾಗಿಸಿ, ವೇದಗಳನ್ನು ಕುದುರೆಗಳನ್ನಾಗಿಸಿ, ಬ್ರಹ್ಮನನ್ನು ಸಾರಥಿಯನ್ನಾಗಿ ಮಾಡಿಕೊಂಡು, ಬಾಣಗಳಲ್ಲಿ ವಿಷ್ಣು ತೇಜಸ್ಸನ್ನು ಬರಮಾಡಿ ತ್ರಿಪುರಾಸುರ ಸಂಹಾರಕ್ಕೆ ಕಾಲರುದ್ರನಾಗಿ ಹೋರಾಡುತ್ತಿದ್ದನು.

ಮೂರು ಕೋಟಿ ದೇವತೆಗಳೂ, ಅವರವರ ಪತ್ನಿಯರೊಂದಿಗೆ, ಶಿವನ ತ್ರಿಪುರಾಸುರ ವಿಜಯ ವನ್ನು ನೋಡಿ ಕಣ್ಣಿಗೆ ಹಬ್ಬ ಮಾಡಿಕೊಳ್ಳಲು ಆತುರದಿಂದ ನೋಡುತ್ತಿದ್ದರು.



ಆ ಸಮಯದಲ್ಲಿ ನಾರದನು ಪಾರ್ವತಿಯ ಬಳಿಗೆ ಬಂದು, "ನೋಡಮ್ಮಾ ಪಾರ್ವತೀ! ತಾರಕಾಸುರನು ಹೆದರಿ ಬೀಳುತ್ತ ಕೆಟ್ಟ ಕೆಟ್ಟ ಸ್ವಪ್ನಗಳನ್ನು ಕಾಣುತ್ತಿದ್ದಾನೆ. ಅವನಿಂದ ನಿನಗೆ ಅಪಾಯ ಬಂದರೂ ಬಂದೀತು. ಏಕೆಂದರೆ ನಿನ್ನ ಮಗನೇ ತನ್ನನ್ನು ಕೊಲ್ಲುವುದೆಂದು ಅವನಿಗೂ ಗೊತ್ತಿದೆ. ವಜ್ರದಂತನೆಂಬ ಮಹಾ ಮಾಯಾವಿಯೊಬ್ಬ ಅವನಿಗೆ ಮಂತ್ರಿಯಾಗಿದ್ದಾನೆ. ಮುಖ್ಯವಾಗಿ ನೀನು ತುಂಬಾ ಜಾಗ್ರತೆಯಲ್ಲಿರಬೇಕು! ಮರೆಯಬೇಡಮ್ಮಾ!" ಎಂದು ಎಚ್ಚರಿಕೆ ಹೇಳಿ ಹೊರಟುಹೋದನು.

ಮೊದಲೇ ಬೇಸರದಿಂದಿದ್ದ ಪಾರ್ವತಿಗೆ ಮತ್ತಿಷ್ಟು ಬೇಸರ ಬಂದಿತು. ಅದರೊಂದಿಗೆ ಭಯವೂ ಸೇರಿತು. ಚೆಂದಾಗಿ ತೈಲಾಭ್ಯಂಜನ ಮಾಡಿಕೊಂಡರೆ ಮನಸ್ಸಿಗೆ ಶಾಂತಿ ದೊರೆಯುವುದೆಂದು ತೋರಿತು.

ಅದರಂತೆ ಪಾರ್ವತಿ ಸ್ನಾನಕ್ಕಾಗಿ ಸುಗಂಧ ದ್ರವ್ಯಗಳಿಂದ ನಲುಗು ಮುದ್ದೆ ತಯಾರಿಸುತ್ತಾ, ಆ ಮುದ್ದೆಯಿಂದ ಒಂದು ಬೊಂಬೆಯನ್ನು ಮಾಡಿ, ಆನಂದದಿಂದ ಅದನ್ನೇ ನೋಡುತ್ತ, ಏನೋ ಭಾವಪರವಶಳಾದಳು. ಆಗ ಆ ಬೊಂಬೆ ಮುದ್ದಾದ ಒಬ್ಬ ಬಾಲಕನ ರೂಪ ಧರಿಸಿ, ಅವಳನ್ನು ನೋಡಿ ನಕ್ಕಿತು. ಪಾರ್ವತಿ ಬೆಚ್ಚಿಬಿದ್ದು, "ಯಾರಪ್ಪಾ? ಫಕ್ಕನೆ ಎಲ್ಲಿಂದ ಬಂದೆ?" ಎಂದು ಪ್ರಶ್ನಿಸಿದಳು.

"ನಿನ್ನ ಕೈಯಿಂದ ಉದುರಿದ ಕಾಂತಿಯನ್ನು ಹೊಂದಿ ಹುಟ್ಟಿದ ನಿನ್ನ ನಲುಗು ಮುದ್ದೆಯವನೇ ನಾನಮ್ಮಾ! ನಿನ್ನ ಪುತ್ರ, ಪುತ್ರ ಗಣಪತಿ ನಾನು!" ಎಂದು ಮುದ್ದಾಗಿ ಹೇಳಿದನು ಆ ಬಾಲಕ. ಪಾರ್ವತಿಗೆ ಆ ಬಾಲನ ಮೇಲೆ ವಾತ್ಸಲ್ಯ ಉಕ್ಕಿ ಬಂದಿತು. ಅವನನ್ನು ಬಾಚಿ ತಬ್ಬಿಕೊಂಡು ಮುದ್ದಾಡಿ, ಒಂದು ಗದಾಂಕುಶವನ್ನು ಅವನ ಕೈಗೆ ಕೊಟ್ಟು, ಎತ್ತಿಕೊಂಡು ಕುಣಿದು ಅವನನ್ನೂ ನಲಿದಾಡಿಸಿ ಆನಂದಿಸಿದಳು.

ಆ ಮೇಲೆ ಅವನನ್ನು ಸಿಂಹದ್ವಾರದ ಹತ್ತಿರ ಇರಿಸಿ, "ಕಂದಾ! ಇಲ್ಲೇ ಇರು! ಯಾರನ್ನೂ, ಒಂದು ಹುಳುವನ್ನು ಕೂಡಾ ಒಳಗೆ ಬಿಡಬೇಡ. ಸುತ್ತಲೂ ಮಾಯಾವೀ ರಾಕ್ಷಸರ ಕಾಟವಂತೆ!" ಎಂದಳು.

"ಅಮ್ಮಾ! ಅದೆಲ್ಲಾ ನಾನು ನೋಡಿಕೊಳ್ಳುತ್ತೇನೆ. ನನಗೆ ತಿನ್ನಲು ಏನಾದರೂ ಕೊಡು. ಮತ್ತೆ!" ಎಂದನು ಹುಡುಗ.

"ಅಯ್ಯೋ ನನ್ನ ಬುದ್ಧಿಗೆ ಬೆಂಕೀ ಬೀಳ!" ಎಂದು ಪಾರ್ವತಿ ಆಗಿಂದಾಗಲೇ ಹೋಗಿ, ಹಿಟ್ಟು ಕಲಿಸಿ ಬೆಲ್ಲದ ಮೋದಕಗಳನ್ನೂ, ಉಂಡ್ಲುಕಗಳನ್ನೂ ಮಾಡಿ ಅವನಿಗೆ ಕೊಟ್ಟು, ಸ್ನಾನಕ್ಕೆ ಹೋದಳು.

ಪಾರ್ವತಿಯನ್ನೇ ಅಂತ್ಯಗೊಳಿಸಿ ಬಿಟ್ಟರೆ ಶಿವನಿಗೆ ಮಗನು ಹುಟ್ಟಲು ಸಾಧ್ಯವಿಲ್ಲವಷ್ಟೆ? ಆಮೇಲೆ ತನ್ನ ಪ್ರಾಣಕ್ಕೆ ಯಾವ ಭಯವೂ ಇಲ್ಲದಂತಾಗುತ್ತದೆಂದುಕೊಂಡು ತಾರಕಾಸುರನು, ಪಾರ್ವತಿಯನ್ನು ಅಪಹರಿಸಿಕೊಂಡು ಬರಲು ವಜ್ರದಂತನನ್ನು ಕಳು



ಹಿಸಿಕೊಟ್ಟನು. ಮಹಾ ಮಾಯಾವಿಯಾದ ವಜ್ರ ದಂತನು, ವಜ್ರಾಯುಧವನ್ನಾದರೂ ಪರಪರನೆ ಕೊರೆದು ಪುಡಿ ಹಾರಿಸಬಲ್ಲ ಹರಿತವಾದ ಕೋರೆ ಹಲ್ಲುಗಳಿರುವ ರಕ್ಕಸ ಇಲಿಯ ರೂಪದಲ್ಲಿ, ಗುಡ್ಡ ಗಳನ್ನು ಕೊರೆದು ಹಿಟ್ಟು ಮಾಡುತ್ತ ಕೈಲಾಸದಲ್ಲಿ ತಾಂಡವಿಸಿಕೊಂಡಿದ್ದನು. ಅಂತಲೇ ಅವನಿಗೆ ಮೂಷಿ ಕಾಸುರನೆಂದು ಹೆಸರುಬಂತು. ಅವನು ಪಾರ್ವತಿ ಯನ್ನು ಅಪಹರಿಸಲು ತನ್ನ ಅನುಚರರಾದ ಗಜ ಕರ್ಣ, ಗೋಕರ್ಣ ಎಂಬ ರಾಕ್ಷಸರನ್ನು ಮುಂದಾಗಿ ಕಳುಹಿಸಿದನು. ಅವರಿಬ್ಬರೂ ಗೂಳಿಗಳ ಹಾಗೆ ಕೊಬ್ಬಿದ ಹುಡುಗರ ರೂಪಧರಿಸಿ, ನಗುತ್ತ ಕಲೆಯುತ್ತ ಸಿಂಹ ದ್ವಾರದಲ್ಲಿ ದಂಡಾಕುಶ ಹಸ್ತನಾಗಿದ್ದ ಬಾಲ ಗಣಪತಿಯನ್ನು ನೋಡಿ, "ಬಾರೋ ಹುಡುಗಾ! ಆಡೋಣ" ಎಂದು ಕರೆದರು.

ಬಾಲಗಣಪತಿ ಅವರನ್ನು ಅಲಕ್ಷ್ಯವಾಗಿ ನೋಡಿ ನಗುತ್ತ, "ಮೊದಲು ಇದನ್ನಿಷ್ಟು ರುಚಿನೋಡಿ!" ಎಂದು ಉಂಡ್ಲುಕಗಳನ್ನು ಅವರ ಮೇಲಕ್ಕೆ ಬಿಸುಟನು. ಅವುಗಳ ಪೆಟ್ಟಿಗೆ ಅವರ ತಲೆಗಳು ಛಿಮ್ಮೆನಿಸಿ, ನಡುಗಿ ಓಡಿ ಹೋಗಲು ನೋಡಿದರು.

"ಓಡುವಿರೇಕೆ? ಹೀಗೆ ಬನ್ನೀ, ಆಡೋಣಾ ಅಂದಿರಲ್ಲಾ!" ಎಂದು ಬಾಲ ಗಣಪತಿ ಅವರ ಬಳಿಗೆ ಹಾರಿ, ಅಡ್ಡನಿಂತು, "ಎರಡು ಕೈಗಳಿಂದ ಕಿವಿಗಳನ್ನು ಹಿಡಿದು ಮೂರು ಮೂರು ಮುಂಡು ಗಾಲು ಹಾಕಿ, ಗಲ್ಲಬಡಿದುಕೊಂಡು ಮತ್ತೆ ಹೋಗಿ! ಇದೇ ಆಟ!" ಎಂದು ಆಜ್ಞೆ ಮಾಡಿದನು.

ಅವರು ಹಾಗೆಯೇ ಮಾಡಿ, ರಾಕ್ಷಸ ರೂಪ ತಳೆದು ಹೋಗಿ ವಜ್ರದಂತನೊಂದಿಗೆ ನಡೆದ ಸಂಗತಿ ಹೇಳಿದರು.

ಅದನ್ನು ಕೇಳಿ ವಜ್ರದಂತನು ಹೂಂಕರಿಸಿ, ಗುಡ್ಡ ಗಳು ನಡುಗುವಂತೆ ಹಲ್ಲು ಕಡಿದು, ರಕ್ಕಸ ಇಲಿಯ ರೂಪದಲ್ಲಿ ಸಿಂಹ ದ್ವಾರದ ಬಳಿಯಲ್ಲಿ ದೊಡ್ಡ ಗುಹೆಯನ್ನು ಕೊರೆದನು. ಇನ್ನೂ ಅವನು ಕೊರೆ ಯುತ್ತಿದ್ದಾಗ ಪುತ್ರ ಗಣಪತಿ ತನ್ನ ಉಡಿದಾರವಾದ ಪಾಶವನ್ನು ಬೀಸಿ, ಅದರ ಉರುಳಿನಲ್ಲಿ ಆ ದೊಡ್ಡ ಇಲಿಯನ್ನು ಹಿಡಿದನು. ಕುತ್ತಿಗೆಗೆ ಬಿದ್ದ ಉರುಳಿ ನಿಂದ ಆ ಇಲಿ ಕೀಚುಕೀಚೆಂದು ಅರಚಲು, ಅದರ ತಲೆಗೆ ನಾಲ್ಕಾರು ಮೊಟ್ಟಿಕಾಯಿಗಳನ್ನು ಕುಟ್ಟಿ ಬಾಲ ಹಿಡಿದು ಎತ್ತಿ ಗಿರಿಗಿರಿ ಬೀಸಿ ಬಿಸುಟು ಬಿಟ್ಟನು ಗಣಪತಿ ಬಾಲ.

ಹಾಗೆ ಬೀಸಿ ಒಗೆಯಲ್ಪಟ್ಟ ಮೂಷಿಕಾಸುರನು ಆಕಾಶದಲ್ಲಿ ಹಾರಿ ಹೋಗಿ ಅವನ ರಾಜ್ಯದಲ್ಲಿರುವ ಅವನ ಭವನದ ಮುಂದೆ ದಭಾರೆಂದು ನಿಜ ರೂಪ ದಿಂದ ಬಿದ್ದು ಆರ್ತನಾದ ಮಾಡಿದನು. ಅವನ ಹೆಂಡತಿಯಾದ ಧವಳೆ ದೊಡ್ಡ ದೇವೀ ಭಕ್ತೆಯಾಗಿ ದ್ದಳು. ಎಂದೆಂದಿಗೂ ತನ್ನ ಮಾಂಗಲ್ಯ ಭಾಗ್ಯ ಉಳಿಯುವಂತೆಯೂ, ಗಂಡನಿಗೆ ಸಾವು ಬಾರ ದಂತೆಯೂ ದೇವಿಯಿಂದ ವರ ಹೊಂದಿದವಳು.

ಅವಳು ಗಂಡನಿಗೆ ಸಮಾಧಾನ ಹೇಳಿ, ತನ್ನ ವರದ ಸಂಗತಿಯನ್ನು ನೆನಪು ಮಾಡಿಸಿ, ದೇವಿಯ ಅಂಶದವಳಾದ ಪಾರ್ವತಿಯ ತಂಟೆಗೆ ಹೋಗ ಬೇಡವೆಂದು ಗಂಡನಿಗೆ ಹಿತವನ್ನು ಹೇಳಿದಳು.

* * *

ತ್ರಿಪುರಾಸುರರನ್ನು ಶಿವನು ಸಂಹಾರ ಮಾಡಿಬಿಟ್ಟನು. ಆಮೇಲೆ ಪಾರ್ವತಿಯನ್ನು ನೋಡುವ ಆತುರದಲ್ಲಿ ಶಿವನು ಬಹುಬೇಗನೇ ಹಿಂದಿರುಗಿ ಬಂದನು. ಅವನು ತನ್ನ ಮಂದಿರದೊಳಗೆ ಪ್ರವೇಶಿಸಲು ನೋಡುವಾಗ, ಸಿಂಹದ್ವಾರದಲ್ಲಿದ್ದ ಬಾಲಗಣಪತಿ ಅವನಿಗೆ ಅಡ್ಡಗಟ್ಟಿನಿಂತನು.

ಶಿವನು ಚಕಿತನಾಗಿ, "ಯಾರೋ ನೀನು ?" ಎಂದು ಗದರಿಸಿ ಕೇಳಿದನು.

ಬಾಲನು ಗಲಗಲ ನಗುತ್ತ, "ಅಮ್ಮನ ಮಗ ! ಮಾಯಾವಿಗಳೂ ವೇಷಧಾರಿಗಳೂ ಇಲ್ಲಿ ಸುತ್ತಲೂ ತಿರುಗುತ್ತಿದ್ದಾರೆ. ಒಂದು ಹುಳವನ್ನು ಕೂಡಾ ಒಳಗೆ ಬಿಡಬಾರದೆಂದು ನನ್ನನ್ನು ಕಾವಲಿಗೆ ಇರಿಸಿದ್ದಾಳೆ. ಎಂದನು ಆ ದಿಟ್ಟಬಾಲಕ.

ಶಿವನ ಹಿಂದಿನಿಂದ, ತ್ರಿಪುರಾಸುರರನ್ನು ಸಂಹಾರ ಮಾಡಿದ ಶಿವನ ವೀರ ಪರಾಕ್ರಮಗಳನ್ನು ಹೊಗಳುತ್ತ, ಜಯ ಜಯ್ಕಾಕಾರ ಮಾಡುತ್ತ ಬರುತ್ತಿದ್ದ ಪ್ರಮಥ ಗಣಗಳೂ, ದೇವತೆಗಳೂ ಅಲ್ಲಿಗೆ ಬಂದು ನಿಂತರು. ಶಿವಮಂದಿರದ ಬಾಗಿಲಿನಲ್ಲಿ ಶಿವನು ಒಬ್ಬ ಬಾಲನೊಂದಿಗೆ ವಾದ ವಿವಾದ ಮಾಡುವುದನ್ನು ನೋಡಿ ಆಶ್ಚರ್ಯಪಡುತ್ತ ಬೊಂಬೆಗಳ ಹಾಗೆ ನಿಂತು ಅವರ ಚರ್ಚೆಯನ್ನು ಕೇಳತೊಡಗಿದರು:

"ನಾನು ಯಾರು ಗೊತ್ತೇನೋ ಹುಡುಗಾ ! ನಾನು ಈಶ್ವರನು. ದೇವನು, ಶಿವದೇವನು !" ಎಂದನು ಶಿವ.

"ನನಗೆ ಯಾರಾದರೂ ಇತರರ ಹಾಗೇನೇ ! ನನ್ನಮ್ಮನೇ ಮಹಾ ದೇವಿ. ಪ್ರಕೃತಿ ಸ್ವರೂಪಿಣಿ.



ಆ ಪ್ರಕೃತಿಯ ಶಾಸನವನ್ನು ಅನುಸರಿಸಿ ನಡೆಯುವುದರ ಹೊರತು ಜೀವ ಕೋಟಿಗಳಿಗೆ ಬೇರೆ ಧರ್ಮವೇ ಇಲ್ಲ. ಅಂತಹ ಅಮ್ಮನ ಆಜ್ಞೆ ಪಾಲಿಸುವುದರ ಹೊರತು ಬೇರೆ ವಿಧಿ ನನಗೂ ಇಲ್ಲ !" ಎಂದನು ಬಾಲಕ ಲಟಲಟ ಕಡ್ಡಿ ಮುರಿದ ಹಾಗೆ.

"ಪೋರಾ ! ಬುದ್ಧಿಯಿಲ್ಲದೆ ದೇವರಿಲ್ಲವೆನ್ನುವಿ. ಎಲ್ಲದಕ್ಕೂ ಮೂಲ ಪರಬ್ರಹ್ಮ. ಅವನೇ ಆದಿದೇವ." ಎಂದು ಶಿವನು ಹೇಳಿದುದನ್ನು ಬಾಲನು ಖಂಡಿಸಿ, "ದೊಡ್ಡವನಾದ ನಿನಗೆ ಗೊತ್ತಿಲ್ಲವೇ? ಆದಿಶಕ್ತಿಯಿಂದ ವಿಶ್ವವೂ ಎಲ್ಲರೂ ಜನಿಸಿದ್ದಾರೆಂಬ ಸೂಕ್ಷ್ಮವನ್ನು ಹೇಳುತ್ತೇನೆ, ಕೇಳು." ಎಂದು ಬಾಲಕನು ಹೇಳ ತೊಡಗಿದನು :

ಮಹಾದೇವಿಯಾದ ಆದಿಶಕ್ತಿ, ಒಮ್ಮೆ ಮೈಮುರಿದುಕೊಂಡಾಗ, ಕೆಂಪು, ನೀಲ ಮತ್ತು ಬಿಳೀ ಬಣ್ಣಗಳ ಕಾಂತಿಗಳು ಹೊರಟುವು. ಕೆಂಪು ಕಾಂತಿಯಿಂದ ಈಶ್ವರನೂ, ನೀಲಕಾಂತಿಯಿಂದ



ವಿಷ್ಣುವೂ, ಬಿಳಿಯ ಕಾಂತಿಯಿಂದ ಬ್ರಹ್ಮನೂ ಹುಟ್ಟಿದರು. ಬ್ರಹ್ಮನೂ, ವಿಷ್ಣುವೂ ದೇವಿ ಹೇಳಿದ ಮಾತಿನಂತೆ ನಡೆಯಲು ಕೇಳಲಿಲ್ಲ. ಆಗ ಅವಳು ತನ್ನ ಮೂರನೇ ಕಣ್ಣನ್ನು ತೆರೆದು ಅದರಿಂದ ಹೊರಟ ಜ್ವಾಲೆಯಿಂದ ಅವರಿಬ್ಬರನ್ನೂ ಬೂದಿಯ ರಾಶಿಯಾಗಿ ಮಾಡಿದಳು. ಗಟ್ಟಿಗನಾದ ಮಹೇಶ್ವರನು ಮಾತ್ರ ಅವಳು ಹೇಳುವ ಹಾಗೆ ಕೇಳುತ್ತೇನೆಂದು ಹೇಳಿ, ಅವಳ ಮೂರನೇ ಕಣ್ಣನ್ನು ತನಗೆ ಕೊಡಬೇಕೆಂದೂ ಪ್ರಾರ್ಥಿಸಿದನು. ದೇವಿ ಸಂತುಷ್ಟಳಾಗಿ ತನ್ನ ಮೂರನೇ ಕಣ್ಣನ್ನು ತೆಗೆದು ಅವನ ಹಣೆಯಲ್ಲಿ ಒತ್ತಿಟ್ಟು ಅಲಂಕರಿಸಿದಳು. ಕೂಡಲೇ ಮಹೇಶ್ವರನು ಆ ಮೂರನೇ ಕಣ್ಣನ್ನು ತೆರೆದು ಅವಳನ್ನೇ ಸುಟ್ಟು ಬಿಟ್ಟನು. ಅವಳು ಉರಿದು ಹೋಗುವಾಗ, ಅಗ್ನಿಯ ರೇಣುಗಳು ಸುತ್ತಲೂ ವ್ಯಾಪಿಸಿ ತೇಜೋ ಮಂಡಲಗಳು ಏರ್ಪಟ್ಟುವು. ಸುತ್ತುಮುತ್ತಲೂ ಬೂದಿಯ ರಾಶಿ ಬಿದ್ದಿತು. ಆ ಬೂದಿ ರಾಶಿಗಳೇ ವಿಶ್ವವಾಗಿ ಮಾರ್ಪಟ್ಟಿತು. ಆ ಮೇಲೆ ಸುಟ್ಟು ಬೂದಿಯಾದ ದೇವಿ ಮತ್ತೆ ಯಥಾ ರೂಪದಲ್ಲೇ ಕಾಣಿಸಿದಳು. ಆದರಿಂದ ಅವಳಿಗೆ ಮಹಾಮಾಯೆ ಎಂಬ ಹೆಸರು ಬಂತು. ಅವಳು ಮಹೇಶ್ವರನನ್ನು ಮೆಚ್ಚಿಕೊಂಡು, ಅವನು ಲಯಕಾರಕನಾಗಿರುವಂತೆ ಆಜ್ಞೆ ಮಾಡಿದಳು. ಬ್ರಹ್ಮನನ್ನೂ, ವಿಷ್ಣುವನ್ನೂ ಅವರ ಬೂದಿಗಳಿಂದಲೇ ಮತ್ತೆ ಎತ್ತಿಕೊಂಡಳು ಆ ಕರುಣಾಮಯಿ. ಇನ್ನೂ ಉಳಿದಿದ್ದ ತನ್ನ ಬೂದಿಯಿಂದ ಮೂರು ಭಾಗಗಳನ್ನು ಮಾಡಿ, ವಾಣಿಯನ್ನೂ, ಲಕ್ಷ್ಮಿಯನ್ನೂ, ಉಮೆಯನ್ನೂ ರೂಪಿಸಿದಳು. ವಾಣಿಯನ್ನು ಬ್ರಹ್ಮನೂ, ಲಕ್ಷ್ಮಿಯನ್ನು ವಿಷ್ಣುವೂ, ಉಮೆಯನ್ನು ಮಹೇಶ್ವರನೂ ಅರ್ಧಾಂಗಿಗಳಾಗಿ ಸ್ವೀಕರಿಸಿ ಲೋಕ ಪಾಲನೆ ಮಾಡುವಂತೆ ಹೇಳಿ, ದೇವಿ ಅಂತರ್ಧಾನಳಾಗಿ ಹೋದಳು.

ಇದನ್ನೆಲ್ಲಾ ಬಾಲನು ಹೇಳಿ ನಿಲ್ಲಿಸಿದ ಮೇಲೆ ಶಿವನು, "ಮುಗಿಯಿತೇ ನಿನ್ನ ಕಟ್ಟು ಕಥೆ?" ಎಂದನು ವ್ಯಂಗವಾಗಿ.

"ನನ್ನದು ಕಟ್ಟುಕಥೆಯಾದರೆ ಬ್ರಹ್ಮದೇವ ಎಂದು ನೀನು ಹೇಳುವುದೆಲ್ಲ ಕೇವಲ ಬೋಳು ವೇದಾಂತ ಅಂದರೆ ತಪ್ಪೇನಿದೆ? ಎಲ್ಲವೂ ನಿಮ್ಮ ಬ್ರಹ್ಮನಿಂದಲೇ ಹುಟ್ಟಿತೆನ್ನುವುದಕ್ಕಿಂತಲೂ ಆದಿಶಕ್ತಿಯಿಂದ ಹುಟ್ಟಿತೆನ್ನುವುದು ಹೆಚ್ಚು ಯಥಾರ್ಥವಾಗಿ ಕಾಣುವುದಿಲ್ಲವೇ? ಎಲ್ಲ ಪ್ರಾಣಿಗಳೂ ಹೆಣ್ಣಿನಿಂದಲೇ ಹುಟ್ಟುವುದು ಪ್ರತ್ಯಕ್ಷ ಕಾಣುವುದಿಲ್ಲವೇ?" ಎಂದು ಕೇಳಿದನು ಬಾಲಕ. ಅವನ ಮಾತುಗಳನ್ನು ಕೇಳುತ್ತಿದ್ದಂತೆ ಅಲ್ಲಿದ್ದ ಗಂಡುಗಳ ಮುಖಗಳಲ್ಲಿ ಬೆಪ್ಪು ಬೆಜ್ಜರಗಳುಂಟಾದುವು. ಒಬ್ಬ ವಿಷ್ಣು ಮಾತ್ರವೇ ಬಾಲನನ್ನು ನೋಡಿ ಮುಗುಳು ನಗು ಸೂಸಿಕೊಂಡಿದ್ದನು. ಬ್ರಹ್ಮನು ಬಾಲನ ಮಾತು ಕೇಳಿ ಹೌದೆಂಬಂತೆ ತಲೆಯೊಲಿದನು. ದೇವಿಯರ ಮುಖಗಳು ಕಳೆಗೊಂಡು ವಿಕಸನವಾದುವು.

ಶಿವನು ಮುಖವನ್ನು ಕೆಂಪುಮಾಡಿಕೊಂಡು, "ನೋಡಲಿಕ್ಕೆ ಚೋಟುದ್ದದ ಹುಡುಗ ನೀನು: ಅದೆಲ್ಲಾ ಹೋಗಲಿ ಬಿಡು. ಹೆದರಬೇಡ. ನಿನ್ನನ್ನೇನೂ ಮಾಡಲಾರೆ. ಒಳ್ಳೆಯ ಮಾತಿನಲ್ಲಿ ಬಾಗಿಲನ್ನು ಬಿಡು. ಬದಿಗೆ ನಿಲ್ಲು" ಎಂದನು.

"ಓಹೋ! ಬೆಲ್ಲ ತೋರಿಸುವಿಯಾ? ನನ್ನ ಕಂಠದಲ್ಲಿ ಪ್ರಾಣವಿರುವಾಗ ನಿನ್ನನ್ನು ಒಳಗೆ ಬಿಡಲಾರೆ!" ಎಂದು ಬಾಲನು ಗಟ್ಟಿಯಾಗಿ ನಿರ್ಭಯದಿಂದ ನಿಂತನು.

ಶಿವನಿಗೆ ಮಿತಿಮೀರಿದ ಕೋಪ ಬಂತು. ಮೊದಲೇ ಯುದ್ಧಾಯಾಸದಿಂದ, ವಿಶ್ರಾಂತಿಯನ್ನು ಹಾರೈಸಿ ಬಂದವನು. ಕೂಡಲೇ ಪ್ರಮಥರ ಕಡೆಗೆ ಕತ್ತು ತಿರುಗಿಸಿ, ಚಿಟಿಕೆ ಹಾಕಿ, ಸನ್ನೆಮಾಡಿದನು ಶಿವ. ಬಾಲನನ್ನು ಎಳೆದು ಬಿಸುಡಲು ಪ್ರಮಥರು ಮುಂದೆ ಹಾರಿ ಬಂದರು.

ಬಾಲನು ನಗುತ್ತ "ಏನೆಂದುಕೊಂಡೆ ನನ್ನನ್ನು! ಸಣ್ಣವನೆಂದು ಕನಿಕರಿಸಿದ ಹಾಗೆ ನಟಿಸಿ ನಿನ್ನ ಗಣಗಳನ್ನು ನನ್ನ ಮೇಲೆ ಹುರಿದುಂಬಿಸುವುದು ಚೆನ್ನಾಗಿದೆಯೇನು? ಸರಿ, ನಾನೂ ಗಣಾಧಿಪತಿಯೇ ಎಂಬುದನ್ನು ತೋರಿಸುತ್ತೇನೆ" ಎಂದು ತಾಯಿ ಕೊಟ್ಟ ದಂಡಾಂಕುಶವನ್ನು ಬಲವಾಗಿ ನೆಲಕ್ಕೆ ಒಂದುಸಾರಿ ಕುಟ್ಟಿದನು.

ಮರುಕ್ಷಣ ನೆಲವೇ ಹೆತ್ತ ಹಾಗೆ ಇದೇ ಬಾಲನಂತಹ ಸಾವಿರಾರು ಪುತ್ರಗಣಪತಿಯರು ಮೇಲೆದ್ದು ನಂದಿಯನ್ನೂ, ಶೃಂಗಿಯನ್ನೂ, ಚಂಡೀಶ್ವರನನ್ನೂ ತಮ್ಮ ಕೈಯಲ್ಲಿದ್ದ ಅಂಕುಶ, ಗದೆ, ಶೂಲ, ಪಾಶಗಳಿಂದ ಪಶುಗಳನ್ನು ಓಡಿಸಿದಂತೆ ಓಡಿಸಿಬಿಟ್ಟರು. ಉಳಿದ ಶಿವಾನುಚರರೆಲ್ಲಾ ಜಾಡುಗಾಣದಂತೆ ಓಡಿಬಿಟ್ಟರು. ಪುತ್ರಗಣಪತಿ ಗಣವೂ ಮಾಯವಾಯಿತು.

ಈ ಅವಾಂತರವನ್ನು ನೋಡಿ ಶಿವನು ರುದ್ರನಾಗಿ ತ್ರಿಶೂಲವನ್ನೆತ್ತಿದನು. ಬಾಲನ ದಂಡಾಂಕುಶದಿಂದ ಹೊಡೆಯಲು ಶಿವನ ತ್ರಿಶೂಲವು ಖಂಗನೆ ಧ್ವನಿಸಿತು. ಬಾಲನು ನಗುತ್ತ, "ನನ್ನ ಅಮ್ಮ ಕೊಟ್ಟ ದಂಡವು ನನ್ನ ಕೈಯಲ್ಲಿರುವಾಗ ನನ್ನನ್ನು ಯಾರೇನೂ ಮಾಡಲು ಸಾಧ್ಯವಿಲ್ಲ. ನೀನು ನನ್ನನ್ನು ಏನೋ ಮಾಡಬೇಕೆಂದಿದ್ದರೆ, ಅದಕ್ಕೆ ವಿಘ್ನಮಾಡಲಾರೆ, ಹುಂ, ನಿರ್ವಿಘ್ನವಾಗಿ ನೆರವೇರಲಿ ನಿನ್ನ ಕಾರ್ಯ!" ಎಂದು ತನ್ನ ಕೈಯಲ್ಲಿದ್ದ ದಂಡಾಂಕುಶವನ್ನು ದೂರ ಬಿಸುಟನು. "ನನಗೆ ಆಜ್ಞೆಮಾಡುವಿಯಾ ಪೋರಾ!" ಎಂದು ಶಿವನು ಮೈ ತಿಳಿಯದ ಕೋಪದಿಂದ ತ್ರಿಶೂಲವನ್ನೆತ್ತಿ ಬಾಲನ ಕಂಠಕ್ಕೆ ಗುರಿಯಿಟ್ಟು ಬೀಸಿದನು. "ಅಮ್ಮಾ!" ಎಂದು ಕೂಗುವ ಬಾಲನ ತಲೆ, ಆಕಾಶದಲ್ಲಿ ಹಾರಿ ಜ್ಯೋತಿಯಂತೆ ಬೆಳಗುತ್ತಾ ಹೋಗಿ ಆಕಾಶದಲ್ಲೇ ಲೀನವಾಯಿತು.





# ಮಿತ್ರಪ್ರೇಮ

ನೂರಾರು ವರ್ಷಗಳ ಹಿಂದೆ, ಗಂಗಾ ತೀರದ ಒಂದು ಗ್ರಾಮದಲ್ಲಿ ಜಯ ಮತ್ತು ಪ್ರತಾಪರೆಂಬ ಇಬ್ಬರು ಕ್ಷತ್ರಿಯ ಕುಮಾರರಿದ್ದರು. ಅವರು ಚಿಕ್ಕ ಪ್ರಾಯದಿಂದಲೂ ಸ್ನೇಹಿತರಾಗಿದ್ದವರು, ವಿದ್ಯಾಭ್ಯಾಸ ಮುಗಿದು ದೊಡ್ಡವರಾಗುವ ವರೆಗೂ ಅತ್ಯಂತ ಸ್ನೇಹದಲ್ಲಿ ಒಟ್ಟಾಗಿಯೇ ಇದ್ದು, ಆಮೇಲೆ ಯಾವ ರಾಜನ ಆಸ್ಥಾನದಲ್ಲಾದರೂ ಸೇವೆ ಸಲ್ಲಿಸಬೇಕೆಂದು, ಇಬ್ಬರೂ ಒಂದೊಂದು ದಿಕ್ಕಿಗೆ ಹೊರಟರು.

ಅವರಲ್ಲಿ ಜಯನು ಅಮರಾವತೀ ನಗರದಲ್ಲಿದ್ದ ವಿದರ್ಭ ದೇಶದ ರಾಜನ ಆಸ್ಥಾನದಲ್ಲಿ ಒಂದು ಸ್ಥಾನವನ್ನು ಸಂಪಾದಿಸಿ, ತನ್ನ ಶೌರ್ಯದಿಂದಲೂ ವಿಶ್ವಾಸದಿಂದಲೂ ಪ್ರಭುವನ್ನು ಮೆಚ್ಚಿಸಿ ಅಭಿವೃದ್ಧಿಗೇರಿದನು. ಅದೇ ವಿಧವಾಗಿ ಪ್ರತಾಪನು ಉಜ್ಜಯಿನೀ ನಗರದಲ್ಲಿ ಮಾಳ್ವ ದೇಶದ ರಾಜನ ಆಸ್ಥಾನವನ್ನು ಪ್ರವೇಶಿಸಿ, ಮೇಲೆ ಬಂದನು.

ಆ ಬಾಲ್ಯ ಮಿತ್ರರು ಒಬ್ಬರನ್ನೊಬ್ಬರು ನೋಡಿಕೊಳ್ಳದೆಯೇ ಹನ್ನೆರಡು ವರ್ಷಗಳ ಕಾಲ ಕಳೆದು ಹೋಯಿತು. ಆದರೆ ಒಂದು ದಿನ ಕೂಡಾ ಅವರು ಒಬ್ಬರನ್ನೊಬ್ಬರು ಮರೆತಿರಲಿಲ್ಲ. ಅಮರಾವತಿಯಿಂದ ಯಾರಾದರೂ ಉಜ್ಜಯಿನಿಗೆ ಹೋಗುತ್ತಿದ್ದರೆ ಅವರೊಂದಿಗೆ ಜಯನು ತನ್ನ ಮಿತ್ರನಿಗೆ ಅಪೂರ್ವವಾದ ವಸ್ತುಗಳನ್ನು ಕಾಣಿಕೆಯಾಗಿ ಕಳುಹಿಸುತ್ತಿದ್ದನು. ಅದೇ ವಿಧವಾಗಿ ಉಜ್ಜಯಿನಿಯಿಂದ ಅಮರಾವತಿಗೆ ಹೋಗುವವರ ಹತ್ತಿರ ಪ್ರತಾಪನು ಜಯನಿಗಾಗಿ ಕಾಣಿಕೆಗಳನ್ನು ಕಳುಹಿಸುತ್ತಿದ್ದನು.

ಹೀಗಿರುವಾಗ ಜಯನಿಗೆ ಒಂದುಸಾರಿ ತನ್ನ ಬಾಲ್ಯ ಮಿತ್ರನಾದ ಪ್ರತಾಪನನ್ನು ಕಣ್ಣಾರೆ ನೋಡಬೇಕೆಂಬ ಬಯಕೆ ತೀವ್ರವಾಯಿತು. ಅವನು ರಾಜನ ಹತ್ತಿರ ರಜೆಯನ್ನು ಕೇಳಿಕೊಂಡು ಅಮರಾವತಿಯಿಂದ ಉಜ್ಜಯಿನಿಗೆ ಹೊರಟನು. ಅಪೂರ್ವವಾಗಿ ತನ್ನನ್ನು ನೋಡಲು ಬಂದ ಬಾಲ್ಯ ಮಿತ್ರನನ್ನು ನೋಡಿ ಪ್ರತಾಪನಿಗಾದ ಸಂತೋಷ ಅಷ್ಟಿಷ್ಟಲ್ಲ. ಅವನು ಜಯನಿಗೆ ಆತ್ಮೀಯವಾದ ಆದರೋಪಚಾರಗಳನ್ನು ಮಾಡಿದನು. ಆದರೆ ಪ್ರತಾಪನ ಆದರ ಸತ್ಕಾರಗಳೆಲ್ಲವೂ ಜಯನಲ್ಲಿ ಏಕೋ ಬೂದಿಗೆ ಸುರಿದಪನ್ನೀರಿನಂತಾಗಿತ್ತು.

ದಿನ ಕಳೆಯುತ್ತಿದ್ದಂತೆ ಜಯನು ಊಟ ತಿಂಡಿಗಳಲ್ಲಿ ಮನಸ್ಸಿಲ್ಲದವನಾದನು. ನಿದ್ದೆ ಬಾರದೆ

೨೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಹೊರಳಾಡುತ್ತ ಸೊರಗಲಾರಂಭಿಸಿದನು. ಈ ವಿಕಾರಗಳಿಗೆಲ್ಲ ಕಾರಣವೇನಂದರೆ, ಪ್ರತಾಪನ ಮನೆಯಲ್ಲಿ ಜಯನ ಕಣ್ಣಿಗೆ ಬಿದ್ದ ಸುಂದರಿಯಾದೊಬ್ಬಳು ಹುಡುಗಿಯೇ! ಅವಳನ್ನು ನೋಡಿದ ಕ್ಷಣದಿಂದಲೂ ಜಯನಿಗೆ ಅವಳ ಧ್ಯಾನವಾಗಿ ಹೋಯಿತು !

ಒಂದು ದಿನ ಜಯನ ಚಿಂತಾ ಪರಿಸ್ಥಿತಿಯನ್ನು ಕಂಡು ಹಿಡಿದು ಪ್ರತಾಪನು ದಿಗಿಲುಬಿದ್ದು, "ಇದೇನು ಜಯಾ ? ಏಕೆ ಹೀಗಿರುವಿ ? ಸೊರಗಿಹೋದೆಯಲ್ಲೋ ? ಆರೋಗ್ಯ ಕೆಟ್ಟಿದೆಯೆ ? ವೈದ್ಯರನ್ನು ಕರೆಯಿಸಲೆ ? " ಎಂದು ಆತುರದಿಂದ ಕೇಳಿದನು.

"ನಿನಗಿಂತಲೂ ಹೆಚ್ಚಿನ ಆಪ್ತರು ನನಗೆ ಯಾರಿದ್ದಾರೆ ಪ್ರತಾಪ್? ನಿಜ ಹೇಳಿಬಿಡುತ್ತೇನೆ. ನಿನ್ನ ಮನೆಯಲ್ಲಿರುವ ಆ ಸುಂದರ ಹುಡುಗಿಯನ್ನು ಮದುವೆಯಾಗದಿದ್ದರೆ ನಾನು ಸತ್ತುಹೋಗುವುದು ನಿಜ." ಎಂದನು ಜಯ. "ಅದುವೋ ಸಂಗತಿ ? ಆ ಹುಡುಗಿಯ ಹೆಸರು ಮನೋರಮೆ. ಅವಳಿಗೆ ತಾಯಿತಂದೆಯರಿಲ್ಲ. ಅವರು ಒಂದು ದೋಣಿಯ ಅವಘಡದಲ್ಲಿ ಒಟ್ಟಿಗೇ ಸತ್ತರು. ನಾನು ಈ ಹುಡುಗಿಯನ್ನು ಮನೆಗೆ ತಂದು ಬೆಳೆಯಿಸುತ್ತಿದ್ದೇನೆ. ಸುಂದರಿಯಾಗಿ ಒಳ್ಳೆಯ ಗುಣವೂ ಇರುವುದರಿಂದ ನಾನೇ ಮದುವೆಯಾಗೋಣವೆಂತಲೇ ಇದ್ದೆನು. ಆದರೆ ನೀನೀಗ ಅವಳನ್ನು ಇಷ್ಟೊಂದು ಪ್ರೇಮಿಸುವುದರಿಂದ ಅವಳನ್ನು ನನ್ನ ತಂಗಿಯೆಂದು ಭಾವಿಸಿ ನಿನಗೇ ಧಾರೆಯೆರೆದು ಕೊಡುತ್ತೇನೆ " ಎಂದು ಹೇಳಿ, ಜಯನನ್ನು ಬಲವಂತದಿಂದ ಒಪ್ಪಿಸಿ, ಸಮೀಪದ ಸುಮುಹೂರ್ತದಲ್ಲಿ ಮನೋರಮೆಯೊಂದಿಗೆ ಅವನಿಗೆ ಮದುವೆ ಮಾಡಿಸಿಯೇಬಿಟ್ಟನು. ಅನಂತರ ಕೆಲವು ದಿನಗಳ ಮೇಲೆ ಜಯನು ಮನೋರಮೆಯ ಸಮೇತ ಉಜ್ಜಯಿನಿಯಿಂದ ಅಮರಾವತಿಗೆ ಹಿಂದಿರುಗಿದನು.

ಮುಂದೆ ಕೆಲವು ವರ್ಷಗಳಲ್ಲಿ ಉಜ್ಜಯಿನಿಯ ರಾಜನು ಸತ್ತು ಹೋಗಿ, ಯುವರಾಜನು ಸಿಂಹಾಸನವನ್ನೇರಿದನು. ಆಗ ಪ್ರತಾಪನಿಗೆ ಕೆಟ್ಟಕಾಲವು ಬಂದಿತು. ಅವನೆಂದರೆ ಆಗದವರು ರಾಜನೊಂದಿಗೆ ಚಾಡಿ ಹೇಳಿದುದರಿಂದ, ರಾಜನು ಅವನನ್ನು ಆಸ್ಥಾನದ ಉದ್ಯೋಗದಿಂದ ತೊಲಗಿಸಿದನು. ಬೇಗದಲ್ಲೇ ಪ್ರತಾಪನಿಗೆ ಪರಮ ದರಿದ್ರ ಪರಿಸ್ಥಿತಿ ಬಂತು. ಸುತ್ತಲಿದ್ದವರೆಲ್ಲ ಅವನಿಗೆ ಶತ್ರುಗಳಾದರು.

ಈ ದುಸ್ಥಿತಿಯಲ್ಲಿ ತನಗೆ ಜಯನೊಬ್ಬನೇ ದಿಕ್ಕು ಎಂದು ಕೊಂಡು ಪ್ರತಾಪನು ಉಟ್ಟ ಬಟ್ಟೆಯೊಂದಿಗೆ ಅಮರಾವತಿ ಪಟ್ಟಣಕ್ಕೆ ಹೊರಟನು. ಪ್ರಯಾಣ ಮಾಡಿ ಅವನು ನಗರವನ್ನು ಪ್ರವೇಶಿಸುವಾಗ ಚೆನ್ನಾಗಿ ಕತ್ತಲಾಗಿ ಹೋಯಿತು. " ಈ ಕತ್ತಲೆಯಲ್ಲಿ ಕೊಳೆ ಬಟ್ಟೆಗಳೊಂದಿಗೆ, ವಿಕೃತಾಕಾರನಾಗಿ, ಬೆಳೆದ ಗಡ್ಡ ಮೀಸೆಗಳಿಂದ ಹೋದರೆ ಜಯನಿಗೆ ತನ್ನ ಗುರುತು ಹತ್ತುವುದೋ ಇಲ್ಲವೋ ಎಂದು ಕೊಂಡನು. ಬೆಳಗಾಗುವವರೆಗೆ ತಂಗಿರಲು, ಪ್ರಶಸ್ತ ಜಾಗನ್ನು ಹುಡುಕುತ್ತಾ ಸ್ಮಶಾನದ ಕಡೆಗೆ ಹೋದನು.

ಅಲ್ಲಿ ಒಂದು ಸ್ಥಳವು ಪ್ರಶಸ್ತವೆಂದು ತೋರಿ, ಅಲ್ಲಿಯೇ ಮಲಗಿದನು. ನಿದ್ದೆಬಾರದೆ ಆಚೀಚೆ ಹೊರಳುತ್ತಾ, ಆಯಾಸ ಪರಿಹಾರ ಮಾಡಿಕೊಂಡಿದ್ದನು. ಸುಮಾರು ಮಧ್ಯ ರಾತ್ರಿಯ ಹೊತ್ತಿಗೆ ಯಾರೋ ಇಬ್ಬರು ಮನುಷ್ಯರು ಅಲ್ಲಿಗೆ ಬಂದರು. ಪ್ರತಾಪನು ಮಲಗಿರುವುದನ್ನು ಅವರು ನೋಡದೆ, ಅಲ್ಲಿ ನಿಂತು ಅವರಿಬ್ಬರೂ ಏನೋ ಚರ್ಚೆ ಮಾಡಲು ತೊಡಗಿದರು. ಕಡೆಗೆ ಕೈ ಕೈ ಕಲೆತು ಜಗಳಾಟಕ್ಕೆ ತೊಡಗಿದರು. ಒಬ್ಬನು ಬಾಕು ತೆಗೆದು ಎರಡನೆಯವನನ್ನು ತಿವಿಯಲು ನೋಡಿದನು. ಎರಡನೆಯವನೂ ಬಾಕು ತೆಗೆದು ಮೊದಲನೆಯವನನ್ನು ತಿವಿದನು. ಬಾಕಿನಿಂದ ತಿವಿಯಲ್ಪಟ್ಟವನು ಕೆಟ್ಟದನಿಯಿಂದ ದಿಕ್ಕುಗಳು ತೂತಾಗುವಂತೆ ಕೂಗಿ ಬಿದ್ದನು. ತಿವಿದವನು ಗಾಬರಿಯಾಗಿ ಪ್ರತಾಪನು ಮಲಗಿರುವ ಕಡೆಯಿಂದಾಗಿಯೇ ಪರಾರಿಯಾದನು.

ಇಬ್ಬರು ವ್ಯಕ್ತಿಗಳು ವಾದವಿವಾದ ಮಾಡಿಕೊಂಡು ಕಡೆಗೆ ಜಗಳಾಟಕ್ಕಿಳಿದುದನ್ನು ಮತ್ತೆ ಕೆಲವರೂ ತುಸುದೂರದಲ್ಲಿ ನಿಂತು, ನೋಡಿದ್ದರು. ಅವರು ಹಂತಕನು ಓಡುವುದನ್ನು ನೋಡಿ, ಅವನನ್ನು ಓಡಿಸುತ್ತಾ ಬಂದು ಪ್ರತಾಪನನ್ನು ನೋಡಿ, ಅವನೇ ಹಂತಕನೆಂದುಕೊಂಡು ಹಿಡಿದು ಕೊಂಡರು. ತಾನು ಅಲ್ಲವೆಂದು ಅವನು ಹೇಳುವುದನ್ನು ಯಾರೂ ಕಿವೀ ಮೇಲೆ ಹಾಕಿಕೊಳ್ಳದೆ ಅವನನ್ನು ಎಲ್ಲರೂ ಸೇರಿ ಎಳೆದು ಕೊಂಡು ಹೋಗಿ ಕೋತ್ವಾಲನ ವಶಕ್ಕೆ ಒಪ್ಪಿಸಿ ಬಿಟ್ಟರು. ಕೋತ್ವಾಲನು ಪ್ರತಾಪನನ್ನು ಬೆಳಗಾಗುವ ವರೆಗೆ ಸೆರೆಮನೆಯಲ್ಲಿರಿಸಿ, ಮರುದಿನ ಭಟರೊಂದಿಗೆ ನ್ಯಾಯಾಸ್ಥಾನಕ್ಕೆ ಕಳುಹಿಸಿದನು.

ಪ್ರತಾಪನನ್ನು ಬೀದಿಯಲ್ಲಿ ಬಂದೀ ಮಾಡಿ ಕರೆದೊಯ್ಯುತ್ತಿರುವಾಗ ಅನೇಕರು ಕುತೂಹಲದಿಂದ ಅವನನ್ನು ನೋಡುತ್ತಿದ್ದರು. ಅವರಲ್ಲಿ ಜಯನೂ ಇದ್ದನು. ಪ್ರತಾಪನನ್ನು ಆ ಸ್ಥಿತಿಯಲ್ಲಿ ಗುರುತು



ಹಿಡಿದ ಜಯನು ಆಶ್ಚರ್ಯ ಪಡುತ್ತ, "ಏನಿದು ! ಎಲ್ಲಿದ್ದ ಪ್ರತಾಪ ಇಲ್ಲಿಗೆ ಹೇಗೆ ಬಂದ ? ಹೀಗೆ ಎಲ್ಲಿಗೆ ಒಯ್ಯುತ್ತಿದ್ದಾರೆ ? " ಎಂದುಕೊಂಡು ಭಟರೊಡನೆ ಏನು ಸಂಗತಿಯೆಂದು ವಿಚಾರಿಸಿದನು.

"ನಿನ್ನೆ ರಾತ್ರಿ ಸ್ಮಶಾನದಲ್ಲಿ ಈ ಮನುಷ್ಯ ಮತ್ತೊಬ್ಬ ಮನುಷ್ಯನನ್ನು ಕೊಲೆಮಾಡಿದ. ವಿಚಾರಣೆಗೆ ಒಯ್ಯುತ್ತಿದ್ದೇವೆ" ಎಂದರು ಭಟರು.

"ಹುಚ್ಚರೇ ! ಸ್ಮಶಾನದಲ್ಲಿ ರಾತ್ರಿ ಕೊಲೆ ಮಾಡಿ ಓಡಿದವನು ನಾನು. ಇವನನ್ನು ಬಿಟ್ಟು ನನ್ನನ್ನು ಹಿಡಿದುಕೊಂಡು ಹೋಗಿ." ಎಂದನು ಜಯ.

ಅದನ್ನು ಕೇಳಿ ಪ್ರತಾಪನು, "ಇವನು ಯಾವನೋ ನನಗೆ ಗೊತ್ತೇ ಇಲ್ಲ. ಸ್ಮಶಾನದಲ್ಲಿ ರಾತ್ರಿ ಕೊಲೆ ಮಾಡಿದವನು ನಾನೇ ಹೊರತು ಇವನು ಅಲ್ಲವೇ ಅಲ್ಲ. ನಡೆಯಿರಿ, ಹೋಗೋಣ" ಎಂದನು.

"ಅವನ ಮಾತು ನಂಬಬೇಡಿ. ನಿಜವಾದ ಕೊಲೆಗಾರ ನಾನೇ." ಎಂದು ಜಯನು ಭಟರ ಮುಂದೆ



ಕೊಂಡಿದ್ದನು. ಅಧಿಕಾರಿಗಳು ತನ್ನನ್ನು ಹಿಡಿಯಲು ಸಾಧ್ಯವಾಗದೆ ಹೋದುದರ ಬದಲಿಗೆ, ಏನೂ ಅರಿಯದ ಇಬ್ಬರು ನಿರ್ದೋಷಿಗಳನ್ನು ಗಲ್ಲಿಗೇರಿಸಲು ತಂದುದನ್ನು ನೋಡಿ ಹಂತಕನಿಗೆ ಕೋಪದಿಂದ ಮೈಯೆಲ್ಲಾ ಉರಿಯಿತು.

ಅವನು ಕೋತ್ವಾಲನ ಬಳಿಗೆ ಹೋಗಿ, "ಚೆನ್ನಾಗಿದೆ ನಿಮ್ಮ ನ್ಯಾಯಂಗವೂ ನೀವೂ! ನಿರ್ದೋಷಿಗಳಾದ ಅವರಿಬ್ಬರನ್ನೂ ಬಿಡುಗಡೆ ಮಾಡಿ, ನನ್ನನ್ನು ಗಲ್ಲಿಗೆ ಹಾಕಿರಿ. ನಿಜವಾದ ಕೊಲೆಗಾರನು ನಾನೇ!" ಎಂದನು.

ವಿಚಾರಣೆಗೆ ಗುರಿಯಾಗದವನನ್ನು ಗಲ್ಲಿಗೇರಿಸುವ ಅಧಿಕಾರ ಕೋತ್ವಾಲನಿಗಿಲ್ಲ. ಅಪರಾಧಿಗಳ ಸಂಖ್ಯೆ ಎರಡರಿಂದ ಮೂರಕ್ಕೆ ಏರಿದೆ. ಕೋತ್ವಾಲನು ಮೂವರನ್ನೂ ಕರೆದುಕೊಂಡು ನ್ಯಾಯಾಸ್ಥಾನಕ್ಕೇ ಹೋದನು.

"ಪುನಃ ಮತ್ತೇನು? ಈ ಹತ್ಯಾಪರಾಧವನ್ನು ವಿಚಾರಿಸಿ ಶಿಕ್ಷೆ ವಿಧಿಸಿದೆನಲ್ಲಾ?" ಎಂದನು ನ್ಯಾಯಾಧಿಕಾರಿ.

"ಈಗ ಮತ್ತೊಬ್ಬ ಹಂತಕನು ದೊರಕಿದ್ದಾನೆ. ತಾವು ಮೂವರನ್ನೂ ಸೇರಿಸಿ ಈ ಕೊಲೆಯನ್ನು ವಿಚಾರಿಸಬೇಕಾಗಿ ಬಂದಿದೆ" ಎಂದನು ಕೋತ್ವಾಲ.

ಈ ಸಾರಿಯ ವಿಚಾರಣೆಯಲ್ಲಿ ಜಯನೂ ಪ್ರತಾಪನೂ ತಾವು ಕೊಲೆಮಾಡಿದವರು ಅಲ್ಲವೆಂಬುದನ್ನು ಒಪ್ಪಿಕೊಂಡರು. "ನೀನು ಕೊಲೆ ಮಾಡಿದವನಲ್ಲವಾದರೆ ಹೌದೆಂದು ಏಕೆ ಹೇಳಿದೆ?" ಎಂದು ನ್ಯಾಯಾಧಿಕಾರಿ ಜಯನನ್ನು ಕೇಳಿದನು.

"ಅಯ್ಯಾ, ಈ ಪ್ರತಾಪನು ಒಂದುಸಾರಿ ನನ್ನ ಪ್ರಾಣವನ್ನು ಕಾಪಾಡಿದಂಥ ಸ್ನೇಹಿತ. ನನಗಾಗಿ ತನ್ನ ಸರ್ವಸ್ವವನ್ನೂ ಧಾರೆಯೆರೆದವನು. ಅವನನ್ನು ಭಟರು ಹತ್ಯಾಪರಾಧದ ಮೇಲೆ ಹಿಡಿದುಕೊಂಡು ಹೋಗುವುದನ್ನು ನೋಡಿ, ಅವನನ್ನು ತಪ್ಪಿಸಲಿಕ್ಕೇ

ಅಡ್ಡ ನಿಂತನು. ಈ ಸ್ಥಿತಿಯನ್ನು ನೋಡಿ ಭಟರಿಗೆ ಏನು ಮಾಡಲೂ ತೋರದೆ, ಇಬ್ಬರನ್ನೂ ಹಿಡಿದುಕೊಂಡು ನ್ಯಾಯಾಸ್ಥಾನಕ್ಕೆ ಕರೆದೊಯ್ದರು. ಅಲ್ಲಿ ನ್ಯಾಯಾಧಿಕಾರಿ ಇಬ್ಬರನ್ನೂ ವಿಚಾರಿಸಿ ಕೂಡಾ ನಿಜವಾದ ಕೊಲೆಗಾರನಾರೆಂಬುದನ್ನು ನಿರ್ಣಯಿಸಲಾಗದೆ, ಸ್ವಲ್ಪ ಹೊತ್ತು ಯೋಚಿಸಿ ಕಡೆಗೆ, "ಈ ಇಬ್ಬರಲ್ಲಿ ಒಬ್ಬನು ಹುಚ್ಚ. ಇನ್ನೊಬ್ಬನು ಹಂತಕ. ಇಬ್ಬರೂ ನಿಷ್ಪ್ರಯೋಜಕರು. ಇಬ್ಬರನ್ನೂ ಗಲ್ಲಿಗೆ ಹಾಕಿಬಿಡ ತಕ್ಕದ್ದು!" ಎಂದು ತೀರ್ಪು ಹೇಳಿದನು.

ಭಟರು ಜಯನನ್ನೂ ಪ್ರತಾಪನನ್ನೂ ವಧ್ಯಸ್ಥಾನಕ್ಕೆ ತೆಗೆದುಕೊಂಡು ಹೋಗಿ, ಅಲ್ಲಿಗೆ ಬಂದ ಕೋತ್ವಾಲನಿಗೆ ನ್ಯಾಯಾಧಿಕಾರಿಯ ತೀರ್ಪನ್ನು ಒಪ್ಪಿಸಿದರು. ಈ ಹೊಸ ರೀತಿಯ ಹಂತಕ ವ್ಯವಹಾರದ ತೀರ್ಪನ್ನು ತಿಳಿದು ಶಿಕ್ಷೆಯನ್ನು ನೋಡಲು ಅನೇಕ ಪೌರರು ಸುತ್ತಲೂ ಗುಂಪು ಕೂಡಿದರು. ಆ ಗುಂಪಿನಲ್ಲಿ ನಿಜವಾದ ಕೊಲೆಗಾರನೂ ಸೇರಿ

ಆ ತಪ್ಪನ್ನು ನನ್ನ ಮೇಲೆ ಹಾಕಿಕೊಂಡೆನು. ಅಷ್ಟೇ ಹೊರತು ಮತ್ತೇನಿಲ್ಲ" ಎಂದನು ಜಯ.

"ಮತ್ತೆ, ನೀನೋ ?" ಎಂದು ನ್ಯಾಯಾಧೀಶನು ಪ್ರತಾಪನನ್ನು ಕೇಳಿದನು.

"ನಾನು ಕೊಲೆಗಾರನಲ್ಲವೆಂದು ನನ್ನನ್ನು ಹಿಡಿದಾಗಲೇ ಹೇಳಿದೆ. ಯಾರೂ ನಂಬಲಿಲ್ಲ. ಆಮೇಲೆ ನನ್ನ ಮಿತ್ರ ತಾನೇ ಕೊಲೆಗಾರನೆಂದುದನ್ನು ನಂಬಿ, ಅವನನ್ನು ತಪ್ಪಿಸಲಿಕ್ಕೆ ನಾನೇ ಕೊಲೆಗಾರನೆಂದು ಹೇಳಿದೆನು, ಅಷ್ಟೇ." ಎಂದನು ಪ್ರತಾಪ.

ನ್ಯಾಯಾಧಿಕಾರಿ ನಿಜವಾದ ಕೊಲೆಗಾರನ ಕಡೆಗೆ ತಿರುಗಿ, "ನಿನ್ನ ವಿಷಯ ಏನು ? ಇವರಿಬ್ಬರನ್ನೂ ಗಲ್ಲಿಗೇರಿಸುವ ಹೊತ್ತಿನವರೆಗೂ ಮುಂದೆ ಬಂದವನಲ್ಲ ನೀನು. ಈಗ ಏಕೆ ಹೀಗೆ ಹೇಳುವೆ ?" ಎಂದು ಕೇಳಿದನು.

"ಅಯ್ಯಾ, ನನ್ನಿಂದ ಸತ್ತವನು ಮಹಾ ಪಾಪಿ. ದ್ರೋಹಿ. ನಾನು ಅವನ ಮೋಸವನ್ನು ಬಲ್ಲವನಾದ್ದರಿಂದ, ಸುಳ್ಳು ಹೇಳಿ ನನ್ನನ್ನು ನಂಬಿಸಿ ಸ್ಮಶಾನದವರೆಗೆ ಕರತಂದು ಜಗಳ ಕೆದರಿದ. ಕಡೆಗೆ ಅವನು ನನ್ನನ್ನು ಕೊಲ್ಲಲು ನೋಡುವಾಗ ಆತ್ಮರಕ್ಷಣಾರ್ಥವಾಗಿ ನಾನು ಅವನನ್ನು ಕೊಲ್ಲುವಂತಾಯಿತು. ನ್ಯಾಯವಾಗಿ ನೋಡಿದರೆ, ಆ ಸಮಾಜ ದ್ರೋಹಿಯನ್ನು ಕೊಂದುದಕ್ಕೆ ನೀವು ನನ್ನನ್ನು ಸನ್ಮಾನಿಸಬೇಕು. ಆದರೆ ನೀವು ಹಾಗೆ ಮಾಡಲಾರಿರಿ, ಗಲ್ಲಿಗೇ ಹಾಕುವಿರಿ. ಅದಕ್ಕೇ ನಾನು ಹೊರಬೀಳದೆ ಇದ್ದೆನು. ಕಡೆಗೆ ನನ್ನ ಬದಲಾಗಿ ಯಾರೋ ಇಬ್ಬರು ನಿರ್ದೋಷಿಗಳಾದ ಸಜ್ಜನರನ್ನು ಗಲ್ಲಿಗೇರಿಸಿದರೆ ನಾನು ಯಾವ ನರಕಕ್ಕೆ ಹೋಗಲಿ ? ಆದ್ದರಿಂದಲೇ ನನ್ನ ತಪ್ಪನ್ನು ಹೊರಗೆ ಕೆಡವಿದ್ದೇನೆ. ಹೀಗೆ ನಾನಾಗಿಯೇ ಹೊರಗೆ ಬರಲು ಕೋತ್ವಾಲರ ಸಮರ್ಥತೆ ಕಾರಣವಲ್ಲ, ಅವರ ಅಸಮರ್ಥತೆಯೇ ಕಾರಣ" ಎಂದನು ನಿಜ ಹಂತಕ.

ನ್ಯಾಯಾಧಿಕಾರಿ ದೂರಾಲೋಚನೆ ಮಾಡಿ ಮೂವರನ್ನೂ ಬಿಡುಗಡೆ ಮಾಡುತ್ತ, ನಿಜ ಹಂತಕನನ್ನು ನೋಡಿ, "ನೀನು ಹತ್ಯಮಾಡಿದವನಾದರೂ ಬಹಳ ಯೋಗ್ಯನಾಗಿ ಕಾಣುವೆ, ನಿನ್ನನ್ನು ಬಿಡುಗಡೆ ಮಾಡುವುದರಿಂದ ಇನ್ನು ಕೊಲೆ ಮಾಡಲಾರೆಯೆಂದೂ, ನಿನಗೆ ಮನುಷ್ಯರ ಪ್ರಾಣದ ಮೇಲೆ ಗೌರವವಿದೆಯೆಂದೂ ಗೊತ್ತಾಗುತ್ತದೆ. ಅದನ್ನು ನಂಬಿ ನಿನ್ನನ್ನು ಬಿಡುಗಡೆಮಾಡಿಸಿದ್ದೇನೆ" ಎಂದನು.

ತರುವಾಯ ಪ್ರತಾಪನು ಜಯನ ಹತ್ತಿರವೇ ಇದ್ದು, ಅವನ ಮೂಲಕ ಅಲ್ಲಿಯ ರಾಜಾ ಸ್ಥಾನದಲ್ಲಿ ಉದ್ಯೋಗ ಸಂಪಾದಿಸಿಕೊಂಡನು. ಅಂದಿನಿಂದ ಆ ಮಿತ್ರರು ಒಟ್ಟಾಗಿದ್ದು ಜೀವಿತಾಂತದವರೆಗೂ ಸುಖವಾಗಿದ್ದರು.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೧ ಜೂನ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



B. Murali



Gopal Shroti

- ★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.
- ★ ಏಪ್ರಿಲ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.
- ★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.
- ★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಫೆಬ್ರವರಿ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ: ನನ್ನ ಸಂಗ್ತಿ ನನ್ನುದುರೇಗ್ಹೊಗ್ತು

ಎರಡನೇ ಫೋಟೋ : ಇದರ ಸಂಗ್ತಿ ಪೂರಾ ನನಗ್ಹೊಗ್ತು

ಕಳುಹಿಸಿದವರು : ಎಸ್. ವಿ. ಆಚಾರ್ಯ, ಉಪ್ಪಾರ ಓಣಿ,
ಗಂಗಾವತಿ, ರಾಯಚೂರು.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

# ಮುಖ್ಯವಾಗಿ ಗಮನಿಸಿರಿ

'ಚಂದಮಾಮ' ಪತ್ರಿಕೆಗೆ ಸಂಬಂಧಪಟ್ಟ ಚಂದಾ,
ಏಜನ್ಸೀ ಡಿಪಾಜಿಟ್ಸ್, ಇಂಡೆಂಟು ಮೊಬಲಗು,
ಪ್ರಕಟನೆಯ ಚಾರ್ಜು ಮೊದಲಾದುವುಗಳನ್ನೆಲ್ಲಾ
ಕೆಳಗಿನ ವಿಳಾಸಕ್ಕೇ ಕಳುಹಿಸಿರಿ.

*

## ಡಾಲ್ಟನ್ ಏಜನ್ಸೀಸ್

**ಚಂದಮಾಮ ಬಿಲ್ಡಿಂಗ್ಸ್**
**ವಡಪಳನಿ, ಮದರಾಸು-೬೦೦ ೦೨೬**

# ರಾಮು ಮತ್ತು ಶ್ಯಾಮು

## ಮೋಸಗಾರರಿಗೆ ಶಾಸ್ತಿ



















